ಭಗವಾನ್‌ಶ್ರೀವೇದವ್ಯಾಸಪ್ರಣೀತ

# ಮಹಾಭಾರತ

ಲಕ್ಷಾಲಂಕಾರಕ್ಕೆ ಅನುಗುಣವಾಗಿ
ಮಹಾಭಾರತತಾತ್ಪರ್ಯನಿರ್ಣಯದೊಂದಿಗೆ
ಪ್ರತಿ ಶ್ಲೋಕಗಳ ಜೊತೆಗೆ ಕನ್ನಡಾನುವಾದ

## ಆದಿಪರ್ವ

### ಭಾಗ-1



ಪ್ರಕಾಶಕರು

ತತ್ವಸಂಶೋಧನಸಂಸತ್ (ರಿ.)
ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿದೆ
ಪಲಿಮಾರು ಮಠ, ಉಡುಪಿ

॥ ಶ್ರೀರಾಮಶ್ರೀ ॥

॥ ಶ್ರೀವೇದವ್ಯಾಸೋ ವಿಜಯತೇ ॥

## ಭಗವಾನ್ ಶ್ರೀವೇದವ್ಯಾಸ ಪ್ರಣೀತ

# ಮಹಾಭಾರತ

# ಭಾಗ-೧

(ಶ್ರೀಮದಾನಂದತೀರ್ಥರ ತಾತ್ಪರ್ಯನಿರ್ಣಯ ಶ್ರೀವಾದಿರಾಜತೀರ್ಥರ ಲಕ್ಷಾಲಂಕಾರದೊಂದಿಗೆ ಪ್ರತಿ ಶ್ಲೋಕಗಳ ಜೊತೆಗೆ ಕನ್ನಡಾನುವಾದ)


**ಪರಮಪೂಜ್ಯ ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರು**

ಶ್ರೀಹೃಷೀಕೇಶತೀರ್ಥಸಂಸ್ಥಾನಂ, ಪಲಿಮಾರು ಮಠ, ಉಡುಪಿ

ಅನುವಾದಕರು :

ವಿದ್ವಾನ್॥ ಪಿ. ಎಸ್. ಶೇಷಗಿರಿ ಆಚಾರ್ಯ,

ಮೈಸೂರು.





ಪ್ರಕಾಶಕರು :

ತತ್ವಸಂಶೋಧನಸಂಸತ್ (ರಿ.)

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ

ಶ್ರೀಪಲಿಮಾರು ಮಠ, ಉಡುಪಿ.

**ಮಹಾಭಾರತ** - ಭಾರತತಾತ್ಪರ್ಯನಿರ್ಣಯ- ಲಕ್ಷಾಲಂಕಾರ ಕನ್ನಡಾನುವಾದದ ಸಮಗ್ರ ಯೋಜನೆಯ ಕೃತಿಗಳನ್ನು ಪರಮಪೂಜ್ಯ ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರ ಷಷ್ಟ್ಯಬ್ದಪೂರ್ತಿಯ ಸಮಾರಂಭದಲ್ಲಿ ಮನ್ಮಥ ಸಂ/ ಕಾರ್ತಿಕ ಬಹುಳ ತೃತೀಯಾ (28.11.2015) ದಂದು ತಿರುಮಲಕ್ಷೇತ್ರದಲ್ಲಿ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು ಅನಾವರಣಗೊಳಿಸಿ ಶ್ರೀನಿವಾಸನ ಅಡಿದಾವರೆಗಳಲ್ಲಿ ಸಮರ್ಪಿಸಿದರು.

## ಆದಿಪರ್ವ ಭಾಗ-೧



ISBN : 978-93-81807-24-8

**ಪುಟಗಳು** - LXXXVI + 628= 714

**ಮುದ್ರಿತ ಪ್ರತಿಗಳು** - 1000

**ಬೆಲೆ** - **ರೂ. 425/-**

**ಅನುವಾದಕರು** - ವಿದ್ವಾನ್ ಪಿ.ಎಸ್. ಶೇಷಗಿರಿ ಆಚಾರ್ಯ, ಮೈಸೂರು.

**ಪ್ರಕಾಶಕರು** - ತತ್ವಸಂಶೋಧನಸಂಸತ್, ಪಲಿಮಾರು ಮಠ, ಉಡುಪಿ.

**ಪುಟ ಸಂಯೋಜನೆ** - ಎಂ. ಶರತ್ ಚಂದ್ರ

**ಅಕ್ಷರ ಜೋಡಣೆ** - ಬೆಮ್ಮತ್ತಿ ಶ್ರೀನಿವಾಸ ಮತ್ತು ಶ್ರೀಮತಿ ಎಸ್. ನಾಗಲತಾ

**ಮುದ್ರಕರು** - ಪವನ್ ಪ್ರಿಂಟರ್ಸ್, ಬೆಂಗಳೂರು
☎ : 96864 89131

**ಗ್ರಂಥಪ್ರಾಪ್ತಿ** - ಪಲಿಮಾರು ಮಠ, ಉಡುಪಿ.



ಶ್ರೀಮದ್ವಾದಿರಾಜಕೇಸರಿಣೇ ನಮಃ



ವಿದ್ಯಾಮಾನ್ಯಾನ್ಮುನೀನ್ನುಮಃ



ಪರಮಪೂಜ್ಯ ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರು

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

**ಪರಮಪೂಜ್ಯ ಶ್ರೀಶ್ರೀವಿಶ್ವೇಶತೀರ್ಥ ಶ್ರೀಪಾದರು**

ಶ್ರೀ ಪೇಜಾವರ ಅಧೋಕ್ಷಜ ಮಠ, ರಥಬೀದಿ, ಉಡುಪಿ.

---

# ಅನುಗ್ರಹ ಸಂದೇಶ

ಜಗತ್ತಿನ ಆಧ್ಯಾತ್ಮಿಕ ಮತ್ತು ಧಾರ್ಮಿಕ ತತ್ವಗಳನ್ನು ಅರಿಯಲು ನಮಗೆ ಇರುವ ಮುಖ್ಯ ಪ್ರಮಾಣಗಳು ವೇದ-ಉಪನಿಷತ್ತುಗಳು ಮತ್ತು ಮಹಾಭಾರತ ಹಾಗೂ ಬ್ರಹ್ಮಸೂತ್ರಗಳು. ಯಾವ ವ್ಯಕ್ತಿಯೂ ನಿರ್ಮಿಸದಿರುವ ಅಪೌರುಷೇಯಗಳಾದ ವೇದೋಪನಿಷತ್ತುಗಳ ಸಂದೇಶದಲ್ಲಿ ನಾವು ಸಂದೇಹ ಪಡಲು ಅವಸರವೇ ಇಲ್ಲ. ವ್ಯಕ್ತಿಯ ಬೌದ್ಧಿಕದೌರ್ಬಲ್ಯವೆನಿಸಿದ ಭ್ರಾಂತಿ ಅಜ್ಞಾನಗಳಿಂದ ಅವನು ನಿರ್ಮಿಸಿದ ಗ್ರಂಥದಲ್ಲಿಯೂ ದೋಷಗಳು ಸಂಭವಿಸಲು ಸಾಧ್ಯ. ವ್ಯಕ್ತಿಯ ಬುದ್ಧಿಯನ್ನೇ ಮೀರಿನಿಂತ ಅಪೌರುಷೇಯ ವೇದೋಪನಿಷತ್ತುಗಳಲ್ಲಿ ಯಾವ ಬೌದ್ಧಿಕ ದೋಷಗಳ ಪ್ರತಿಫಲನವೂ ಇರಲು ಸಾಧ್ಯವಿಲ್ಲ.

ಅದರಂತೆಯೇ ಸರ್ವಜ್ಞನಾದ ಭಗವಂತನೇ ವೇದವ್ಯಾಸರೂಪದಲ್ಲಿ ಅವತರಿಸಿ ರಚಿಸಿದ ಮಹಾಭಾರತವೂ ಪರಮ ಪ್ರಮಾಣವೆನಿಸಿದೆ. ಭಗವಂತನ ಅನಂತ ವಿಶಾಲ ಜ್ಞಾನದಲ್ಲಿ ವೇದಗಳಲ್ಲಿ ಹೇಳದ ಅಪೂರ್ವ ವಿಷಯಗಳೂ ಗೋಚರವಾಗುತ್ತವೆ. ಅಂತಹ ಪರಮಾತ್ಮನೇ ರಚಿಸಿದ ಮಹಾಭಾರತದಲ್ಲಿಲ್ಲದ ಸತ್ಯವನ್ನು ಮತ್ತೆಲ್ಲಿ ಕಾಣಲು ಸಾಧ್ಯ? ಈ ಎಲ್ಲ ಪ್ರಮಾಣ ಗ್ರಂಥಗಳ ನಿಜಾರ್ಥವನ್ನು ತಿಳಿಯಲು ವೇದವ್ಯಾಸರೇ ರಚಿಸಿದ ಸರ್ವಶಾಸ್ತ್ರ ನಿರ್ಣಾಯಕವಾದ ಬ್ರಹ್ಮಸೂತ್ರಗಳ ಅವಶ್ಯಕತೆಯೂ ಇದೆ. ಹಿಡಿಯಿಲ್ಲದ ಕತ್ತಿ ಕೊಡಲಿಗಳಿಂದ ಯಾವುದನ್ನೂ ಭೇದಿಸಲು ಶಕ್ಯವಾಗದಂತೆ ಬ್ರಹ್ಮಸೂತ್ರದ ಹಿಡಿಯಿಲ್ಲದ ಪ್ರಮಾಣ ಗ್ರಂಥಗಳಿಂದ ನಮ್ಮ ಅಜ್ಞಾನವನ್ನು ಛಿನ್ನ ಭಿನ್ನಗೊಳಿಸಲು ಸಾಧ್ಯವಿಲ್ಲ. ಈ ರೀತಿಯಲ್ಲಿ ವೇದ, ಮಹಾಭಾರತ, ಬ್ರಹ್ಮಸೂತ್ರವೆಂಬ ಮಹಾಗ್ರಂಥಗಳು ನಮ್ಮ ಅಧ್ಯಾತ್ಮ ದರ್ಶನಕ್ಕೆ ಅತ್ಯಾವಶ್ಯಕವಾಗಿದೆ.

ಇವುಗಳಲ್ಲಿ ಮಹೋನ್ನತಗ್ರಂಥವೆನಿಸಿದ ಮಹಾಭಾರತ ಗ್ರಂಥಕ್ಕೆ ಸಂಬಂಧಿಸಿದ ಅಷ್ಟಮಠದ ಪ್ರಾಚೀನ ಪ್ರತಿಗಳಲ್ಲಿರುವ ಪಾಠಗಳನ್ನು ಇತರ ಮುದ್ರಿತ ಪುಸ್ತಕದಲ್ಲಿರುವ ಪಾಠಗಳನ್ನು ಅನೇಕ ವಿದ್ವಾಂಸರ ಸಹಕಾರದಿಂದ ಗುರುತಿಸಿ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರು ಮಹಾಭಾರತದ ಶುದ್ಧಪಾಠವನ್ನು ಸಮಾಜಕ್ಕೆ ಅರ್ಪಿಸುತ್ತಿದ್ದಾರೆ.

ಶ್ರೀಮಧ್ವಾಚಾರ್ಯರ ಕಾಲದಲ್ಲಿಯೇ ಮಹಾಭಾರತ ಪಾಠದಲ್ಲಿ ಬಹಳಷ್ಟು ವಿಕೃತಿಗಳಾಗಿವೆ. ಪಾಠಗಳ ಲೋಪ, ವ್ಯತ್ಯಾಸ, ಪ್ರಕ್ಷೇಪಗಳ ಗೊಂದಲ ಸಾಕಷ್ಟು ನಡೆದಿವೆ. ಶುದ್ಧಪಾಠದ ಕೋಟ್ಯಾಂಶವೂ ಇಲ್ಲವೆಂದು ಆಚಾರ್ಯರೇ ಹೇಳಿದ್ದಾರೆ. ಬೇರೆ ಬೇರೆ ಪ್ರದೇಶಗಳಲ್ಲಿರುವ ಅನೇಕ ಗ್ರಂಥಗಳನ್ನು ಪರಿಶೀಲಿಸಿ ಶ್ರೀ ವೇದವ್ಯಾಸರು ಹೇಗೆ ಹೇಳಿದ್ದಾರೋ ಅದೇ ರೀತಿಯ ಅಧಿಕೃತ ಗ್ರಂಥವನ್ನು ಶ್ರೀಮಧ್ವಾಚಾರ್ಯರು ಸಂಶೋಧಿಸಿ ಅದಕ್ಕೆ ಅನುಗುಣವಾಗಿ ಮಹಾಭಾರತ ತಾತ್ಪರ್ಯ ನಿರ್ಣಯವನ್ನು ರಚಿಸಿದ್ದಾರೆ. ಇನ್ನೂ ಸಾಕಷ್ಟು ಪ್ರಕ್ಷೇಪ ವಿಕ್ಷೇಪಗಳು ಆಗಿವೆ. ಆದುದರಿಂದ ಶ್ರೀಮಧ್ವಾಚಾರ್ಯರ ತಾತ್ಪರ್ಯ ನಿರ್ಣಯ, ಶ್ರೀ ವಾದಿರಾಜರ ಲಕ್ಷಾಭರಣ ಗ್ರಂಥಗಳನ್ನು ಆಧರಿಸಿ ಸರಿಯಾದ ಪಾಠ ಸಂಶೋಧನೆಯ ಕಾರ್ಯವು ಆಗಬೇಕಾಗಿದೆ. ಶ್ರೀಪಾದರು ಇವುಗಳ ಸಂಯೋಜನೆಯ ಜೊತೆಯಲ್ಲಿ ಹಮ್ಮಿಕೊಂಡಿರುವ ಪಾಠ ಸಮೀಕ್ಷಾತ್ಮಕವಾದ ಸಂಶೋಧನಾತ್ಮಕವಾದ ಈ ಸತ್ಕರ್ಮವು ಅತ್ಯಂತ ಶ್ಲಾಘನೀಯವಾಗಿದೆ.

ನಮ್ಮ ವಿದ್ಯಾಗುರುಗಳಾದ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರ ಮೂಲಪಾಠ ಶೋಧನೆಯ ಕನಸು ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರ ಮೂಲಕ ನನಸಾಗಿದೆ. ಈ ಯೋಜನೆಯು ಪೂರ್ಣತೆಯನ್ನು ಪಡೆಯಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ. ಇದರಲ್ಲಿ ಪರಿಶ್ರಮವಹಿಸಿದ ವಿದ್ವಾನ್ ಪಿ.ಎಸ್. ಶೇಷಗಿರಿ ಆಚಾರ್ಯರಿಗೂ ಮತ್ತು ಅನೇಕ ವಿದ್ವಾಂಸರಿಗೂ ಶ್ರೀಹರಿವಾಯುಗುರುಗಳ ಅನುಗ್ರಹವನ್ನು ಬಯಸಿ ಈ ಕೃತಿಯು ಸಮಸ್ತ ಜಿಜ್ಞಾಸುಗಳಿಗೂ ದೊರಕುವಂತಾಗಲೆಂದು ಅಪೇಕ್ಷಿಸುತ್ತೇವೆ.

ನಾರಾಯಣ ಸ್ಮರಣೆಗಳು

**ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು**

ಶ್ರೀ ಪೇಜಾವರ ಅಧೋಕ್ಷಜ ಮಠ, ಉಡುಪಿ.

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

**ಪರಮಪೂಜ್ಯ ಶ್ರೀಶ್ರೀವಿಶ್ವಪ್ರಿಯತೀರ್ಥ ಶ್ರೀಪಾದರು**

**ಶ್ರೀ ಅದಮಾರು ಮಠ, ರಥಬೀದಿ, ಉಡುಪಿ.**

---

# ಅನುಗ್ರಹ ಸಂದೇಶ

ಶಬ್ದ ಅರ್ಥ ಎರಡರಲ್ಲೂ ಗುರುಭೂತವಾದ ಗ್ರಂಥ. ಆದ್ದರಿಂದ ಇದಕ್ಕೆ ಮಹಾಭಾರತ ಎಂದು ಹೆಸರು. ಈ ಗ್ರಂಥವು ಒಳಗೊಳ್ಳದ ವಿಷಯವಿಲ್ಲ. ಮಹಾಭಾರತದಲ್ಲಿ ಒಂದು ವಸ್ತುವಿನ ಪರಿಚಯ ಇಲ್ಲ ಅಂದರೆ ಆ ವಸ್ತು ಜಗತ್ತಿನಲ್ಲಿ ಎಲ್ಲಿಯೂ ಇಲ್ಲ ಎಂದರ್ಥ.

ಸಾತ್ವಿಕ ಜೀವರಾಶಿಗಳಿಗೆ ಸರಿಯಾದ ತಿಳುವಳಿಕೆ ಬರಬೇಕು. ಅವರು ಉದ್ಧೃತರಾಗಬೇಕು. ಸ್ವರೂಪದಲ್ಲಿ ಯೋಗ್ಯತೆ ಇದ್ದರೂ ದೈಹಿಕವಾಗಿ ಕೆಲವರಿಗೆ ವೇದಾಧ್ಯಯನದ ಮೂಲಕ ಮೇಲೇರಲು ಅಸಾಧ್ಯ. ಉದಾ- ಸ್ತ್ರೀಯರು, ಶೂದ್ರರು. ಜನ್ಮಾಂತರದಲ್ಲಿ ಉತ್ತಮ ವರ್ಣದವರಾಗಿಯೋ ಪುರುಷರಾಗಿಯೋ ಹುಟ್ಟಿ ಅಧ್ಯಯನ ಮಾಡಬಹುದು. ಆದರೆ ಈ ಜನ್ಮ ವ್ಯರ್ಥವಾಗಬಾರದು. ಅದಕ್ಕಾಗಿ ವೇದವ್ಯಾಸರು ರಚಿಸಿದ ಗ್ರಂಥವೇ ಮಹಾಭಾರತ. ಇದಕ್ಕೆ ಪಂಚಮವೇದ ಎಂದು ಹೆಸರು. ಈ ಗ್ರಂಥಕ್ಕೆ ಸ್ತ್ರೀ-ಶೂದ್ರರೂ ಅಧಿಕಾರಿಗಳು. ತಥಾಚ ಎಲ್ಲಾ ವಿಷಯಗಳನ್ನೂ ಒಳಗೊಂಡ ಎಲ್ಲರಿಗೂ ಎಟಕುವ ಗ್ರಂಥ ಎಂಬುದು ಇದರ ಮಹತ್ವ.

ಮೇಲ್ನೋಟಕ್ಕೆ ಈ ಗ್ರಂಥವನ್ನು ನೋಡಿದಾಗ ಆಸ್ತಿಗಾಗಿ ಅಣ್ಣತಮ್ಮಂದಿರಲ್ಲಿ ನಡೆದ ಜಗಳವಾಗಿ ತೋರುತ್ತದೆ. ಇಷ್ಟೇ ಆಗಿದ್ದರೆ ಮಹತ್ವ ಬರುತ್ತಿರಲಿಲ್ಲ. ಆಚಾರ್ಯ ಮಧ್ವರ ಆಧ್ಯಾತ್ಮಿಕ ಪರವಾಗಿ ಅರ್ಥಮಾಡಿ ಇದರ ಮಹತ್ವವನ್ನು ಶಿಖರಕ್ಕೆ ಏರಿಸಿದ್ದಾರೆ. ಆದ್ದರಿಂದ ಪ್ರತಿಯೊಬ್ಬರು ಅಭ್ಯಸಿಸಬೇಕಾದ ಗ್ರಂಥವಿದು.

ಆದರೆ ಶುದ್ಧವಾದ ಪಾಠಕ್ಕೆ ದಾರಿದ್ರ್ಯ ಇದೆ. ಆದ್ದರಿಂದ ಅರ್ಥಕ್ಕಿಂತ ಅನರ್ಥವಾಗುವುದೇ ಜಾಸ್ತಿ. ಇದನ್ನು ಮನಗಂಡ ಪಲಿಮಾರು ಮಠಾಧೀಶರಾದ ಶ್ರೀ ಶ್ರೀ ವಿದ್ಯಾಧೀಶತೀರ್ಥರು ಸರಿಯಾದ ಪಾಠಕ್ಕಾಗಿ ಶ್ರಮಿಸಿದರು. ಬೇರೆ

ಬೇರೆ ರಾಜ್ಯಗಳ ಪ್ರಾಚೀನ ಗ್ರಂಥಗಳನ್ನು ಏಕತ್ರ ಸೇರಿಸಿದರು. ವಿದ್ವಾಂಸರುಗಳಿಂದ ಕೃಷಿ ಮಾಡಿಸಿದರು. ಸರಿಯಾದ ಪಾಠವನ್ನು ಆಸ್ತಿಕ ಸಮಾಜಕ್ಕೆ ಒದಗಿಸುತ್ತಿದ್ದಾರೆ. ವಿದ್ಯಾಧೀಶರ ಆಶ್ರಮಗುರುಗಳಾದ ನಮ್ಮ ವಿದ್ಯಾಗುರುಗಳಾದ ಶ್ರೀ ಶ್ರೀ ವಿದ್ಯಾಮಾನ್ಯರ ಜನ್ಮಶತಾಬ್ದಿಯ ಸಂದರ್ಭದಲ್ಲಿ 100 ಸಂಪುಟಗಳಲ್ಲಿ ಹೊರತರುವುದು ಸಾಮಾನ್ಯ ಕೆಲಸವಲ್ಲ. ಇವರ ಈ ಕೆಲಸದಲ್ಲಿ ಆಸ್ತಿಕ ಸಮಾಜವು ಕೈ ಜೋಡಿಸಲಿ. ಪುಣ್ಯಸಂಪಾದಿಸಲಿ. ಪಾವನವಾಗಲಿ ಎಂದು ಉಡುಪಿ ಶ್ರೀಕೃಷ್ಣ-ಮುಖ್ಯಪ್ರಾಣರಲ್ಲಿ ನಮ್ಮ ಪ್ರಾರ್ಥನೆ.

ನಾರಾಯಣ ಸ್ಮರಣೆಗಳು
**ಶ್ರೀ ಶ್ರೀ ವಿಶ್ವಪ್ರಿಯತೀರ್ಥ ಶ್ರೀಪಾದಂಗಳವರು**
ಶ್ರೀ ಅದಮಾರು ಮಠ, ಉಡುಪಿ.

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

**ಪರಮಪೂಜ್ಯ ಶ್ರೀಶ್ರೀವಿದ್ಯಾಧೀಶತೀರ್ಥ ಶ್ರೀಪಾದರು**

ಶ್ರೀ ಹೃಷೀಕೇಶತೀರ್ಥ ಸಂಸ್ಥಾನಮ್, ಶ್ರೀಪಲಿಮಾರು ಮಠ, ಉಡುಪಿ.

# ಅನುಗ್ರಹ ಸಂದೇಶ

ಶ್ರೀಮಹಾಭಾರತ ಮತ್ತು ಶ್ರೀಮದ್ಭಾಗವತ ವೇದಪುರುಷನ ಎರಡು ದಿವ್ಯನೇತ್ರಗಳು, ವೇದಾರ್ಥಪರಿಬೃಂಹಿತವಾದವುಗಳು, ವೇದಾರ್ಥ ನಿರ್ಣಾಯಕಗಳು, ಎರಡು ಕೃತಿಗಳು ಏಕಕರ್ತೃಕಗಳು.

ಭಾಗವತದಲ್ಲಿ ಎಲ್ಲಿಲ್ಲದ ಒಲವು, ಮಹಾಭಾರತದಲ್ಲಿ ಭಯವು. ಮಹಾಭಾರತದ ಬಗ್ಗೆ ಅದೆಷ್ಟು ಭಯ ಎಂದರೆ ಮನೆಯೊಳಗೆ ಪುಸ್ತಕಕ್ಕೆ ಪ್ರವೇಶ ನಿಷಿದ್ಧ. ಮಹಾಭಾರತದ ಬಗೆಗಿರುವ ತಪ್ಪು ಕಲ್ಪನೆಗಳೇ ಇದಕ್ಕೆ ಮೂಲ. ಜಗಳದ ಆತಂಕವೇ ಇದಕ್ಕೆಲ್ಲ ಕಾರಣ. ಮಹಾಭಾರತ ಎಂಬ ಶಬ್ದ ಜಗಳಕ್ಕೆ ಪರ್ಯಾಯ ಪದವಾಗಿ ರೂಢಿಯಲ್ಲಿದೆ. ವಾಸ್ತವಿಕವಾಗಿ ಮಹಾಭಾರತವು ಜಗಳ ಗ್ರಂಥವಲ್ಲ, ಜಯಗ್ರಂಥ, ಜಯಪ್ರದ ಮಂತ್ರ.

'ಜಯೋ ನಾಮೇತಿಹಾಸೋಽಯಂ ಕೃಷ್ಣದ್ವೈಪಾಯನೇರಿತಃ' ಎನ್ನುವುದು ವ್ಯಾಸರದ್ದೇ ಮಾತು. ಈ ಮಾತನ್ನು ಶ್ರೀಮದಾಚಾರ್ಯರು ಗೀತಾರ್ಥ ಚಿಂತನೆಯಲ್ಲಿ ಉದ್ಧರಿಸಿದ್ದುಂಟು. ಮಹಾಭಾರತದ ಹೆಸರು ಹೇಳಿದರೆ ಸಾಕು ಜಗಳವಾಗುವುದಿಲ್ಲ; ಅಷ್ಟೇ ಅಲ್ಲ ಕಲಹಕ್ಕೆ ಕಾರಣವಾದ ಸಕಲ ದುರಿತ ತರಿಯುವ ತಾಕತ್ತು ಅದಕ್ಕಿದೆ ಅನ್ನುತ್ತಾರೆ. ಎಷ್ಟೋ ಜನ ಅನುಭವಿಸಿಯೂ ಇದ್ದಾರೆ.

ಮಹತ್ತ್ವಾತ್ ಭಾರವತ್ತ್ವಾಚ್ಚ ಮಹಾಭಾರತಮುಚ್ಯತೇ ।
ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥

ಭಾರಭರಿತ ಗ್ರಂಥವಿದು. ಆದಕ್ಕೆಂದೇ ಭಾರತ. ಪುಸ್ತಕವೂ ಭಾರ. ಶಬ್ದಗಳೂ ಭಾರ. ಅರ್ಥಗಳೂ ಭಾರ. ಶಬ್ದಗಳ ಜೋಡಣೆ, ಅನುರಣನೆ ಇಲ್ಲಿದೆ. ಆರ್ಷಭಾಷೆಯ ಸೊಬಗು ತುಂಬಿತುಳುಕಿದೆ. ಮೇಲ್ನೋಟಕ್ಕೆ ಬಿಡಿಸಲಾಗದ

ಗಂಟಿನ ಒಗಟಿನಂಥ ಚಿಂತನೆಗಳನ್ನು ಮುತ್ತಿನ ಮಾತಿನಲ್ಲಿ ಪೋಣಿಸಿದ್ದಾರೆ. ಭಾರತದ ಭವ್ಯಶಬ್ದಗಳ ಶ್ರವಣವೇ ಆಪ್ಯಾಯಮಾನ. ಕರ್ಣ ರಸಾಯನ. ವೇದಪ್ರತಿಬಿಂಬವಾದ ಈ ಮಹಾಭಾರತವು ವೇದದಂತೆ ಮೂರು ರೀತಿಯಾಗಿ ತನ್ನನ್ನು ತೆರೆದುಕೊಳ್ಳುತ್ತದೆ.

**ಮನ್ವಾದಿ ಕೇಚಿದ್ ಬ್ರುವತೇ ಹ್ಯಾಸ್ತೀಕಾದಿ ತಥಾಪರೇ ।**
**ತತೋಪರಿಚರಾದನ್ಯೇ ಭಾರತಂ ಪರಿಚಕ್ಷತೇ ॥**

ಅತೀಂದ್ರಿಯವಾದ ಚಿಂತನೆಯನ್ನೊಪ್ಪುವ ಪಾಂಡವರ ಕಥೆ ಇಲ್ಲಿದೆ. ದೇವರನ್ನೊಪ್ಪದೆ ದಾರಿತಪ್ಪಿದ ಕೌರವರ ಇತಿಹಾಸ ಇಲ್ಲಿದೆ. ಮನನೀಯವಾದ ಗುಣಗಳ ಚಿಂತನೆ ತುಂಬಲ್ಪಟ್ಟಿದೆ. ಸರ್ವರಿಗಿಂತಲೂ ಉಪರಿ ಸಂಚಾರ ಮಾಡುವ ಸರ್ವೋತ್ತಮನಾದ ಭಗವಂತನ ಮಹಿಮೆಯ ಬಣ್ಣನೆ ಸಮಗ್ರ ಭಾರತದಲ್ಲಿದೆ. ಭಾರತದ ಲಕ್ಷಶ್ಲೋಕಗಳಿಗೂ ಲಕ್ಷ್ಯ ಶ್ರೀಕೃಷ್ಣನತ್ತ. ಚಿತ್ತ ಶ್ರೀಹರಿಯತ್ತ. ಮೂರು ಮೂರು ಅರ್ಥವ್ಯಾಪ್ತಿಯುಳ್ಳ ವೇದಪ್ರತಿಬಿಂಬವಾದ ಮಹಾಭಾರತವು ಅಕ್ಷರಶಃ ಹತ್ತು ಹತ್ತು ಅರ್ಥಗಳನ್ನೊಳಗೊಂಡು ಭಾರತವೆನ್ನುವ ಹೆಸರು ಅನ್ವರ್ಥವಾಗಿದೆ. ನೂರು ಅರ್ಥಗಳ ಸಾವಿರ ನಾಮಗಳಡಗಿಕೊಂಡಿರುವುದು ಮಹಾಭಾರತದ ಗರ್ಭದಲ್ಲಿ.

**ತ್ರಯೋರ್ಥಾಃ ಸರ್ವವೇದೇಷು ದಶಾರ್ಥಾ ಸರ್ವಭಾರತೇ ।**
**ವಿಷ್ಣೋಃ ಸಹಸ್ರನಾಮಾಪಿ ನಿರಂತರಶತಾರ್ಥಕಮ್ ॥**

ಮಹಾಭಾರತ ರಚನೆಗೊಂಡದ್ದು ಪಾತ್ರಧಾರಿಗಳು ಬಂದಮೇಲಲ್ಲ. ಬರುವ ಮೊದಲೇ ಎನ್ನುವುದು ವ್ಯಾಸರ ಸಾರ್ವಜ್ಞಕ್ಕೆ, ದೇವತ್ವಕ್ಕೆ ಸಾಕ್ಷಿ. ಎಷ್ಟೋ ವರ್ಷಗಳ ನಂತರ ನಡೆಯುವ ಯುದ್ಧದ ವರ್ಣನೆ ರೋಮಾಂಚನ ಹುಟ್ಟಿಸುತ್ತದೆ. ಯುದ್ಧ - ನೋಡಿರುವವನೇ ಯುದ್ಧದಲ್ಲಿ ನಡೆಯುವುದನ್ನು ವರ್ಣಿಸಲು ಸೋಲುತ್ತಾನೆ. ಮುಂದೆ ನಡೆಯುವ ಯುದ್ಧವನ್ನು ತದ್ವತ್ತಾಗಿ ವರ್ಣಿಸಿದ ವ್ಯಾಸರನ್ನು ನಾರಾಯಣನಲ್ಲದೇ ಬೇರೆಯವನನ್ನಾಗಿ ತಿಳಿಯಬಾರದು ಎನ್ನುವುದೂ ವ್ಯಾಸದರ್ಶನವೇ ಆಗಿದೆ.

**'ಕೋ ಹ್ಯನ್ಯಃ ಪುಂಡರೀಕಾಕ್ಷಾತ್ ಮಹಾಭಾರತಕೃದ್ಭವೇತ್'**

ಇಂತಹ ಮಹಾಭಾರತದ ಅಧ್ಯಯನ ಪಂಚಭೂತಗಳ ಸಮಸ್ಯೆಯುಳ್ಳ ಪ್ರಪಂಚವನ್ನೇ ಮರೆಯುವಂತೆ ಮಾಡುತ್ತದೆ, ಎತ್ತರದ ಆನಂದದಲ್ಲಿ ಮುಳುಗಿಸುತ್ತದೆ ಎನ್ನುವುದು ಖಂಡಿತ ಉತ್ಪ್ರೇಕ್ಷೆಯಲ್ಲ. ಈ ಉದ್ದೇಶದಿಂದ ಆಚಾರ್ಯ ಮಧ್ವರ ತಾತ್ಪರ್ಯನಿರ್ಣಯ, ಶ್ರೀವಾದಿರಾಜರ ಲಕ್ಷಾಲಂಕಾರವನ್ನು ಆಧರಿಸಿ ಮೂಲಪಾಠ ಶೋಧನೆಯ ಹಿನ್ನೆಲೆಯಲ್ಲಿ ಗ್ರಂಥದ ಪ್ರಕಟನೆಯನ್ನು ಮಾಡುತ್ತಿದ್ದೇವೆ.

ಇದರ ಹಿಂದೆ ಇದಕ್ಕಾಗಿ ಜೀವನವನ್ನೇ ಮುಡಿಪಾಗಿಟ್ಟ ಒಂದು ತಂಡವೇ ಇದೆ. ಇದರ ನೇತೃತ್ವ ವಿದ್ವಾಂಸರಾದ ಶ್ರೀ ಶೇಷಗಿರಿ ಆಚಾರ್ಯರದ್ದು. ಶ್ರೀ ವಿಶ್ವೇಶತೀರ್ಥರ ವಿದ್ಯಾಪೀಠದಲ್ಲಿ ಓದಿದ ಇವರ ಸಾಧನೆ ಬಹಳ ಶ್ರೇಷ್ಠವಾದುದು. ತಿರುಪತಿಯ ತಿಮ್ಮಪ್ಪನ ಎತ್ತರದ ಸನ್ನಿಧಾನದಲ್ಲಿ ಭಾರತ ಪರ್ವಗಳ ಪರ್ವತದ ಆವಿಷ್ಕಾರ ಶೇಷಗಿರಿ ಆಚಾರ್ಯರಿಂದ ಎನ್ನುವುದು ಸಂತಸದ ಸಂಗತಿಯೇ ಆಗಿದೆ. ಶ್ರೀ ಶೇಷಗಿರಿ ಆಚಾರ್ಯರ ಹಿಂದೆ ಅನೇಕ ವಿದ್ವಾಂಸರು ಧ್ವನಿಗೂಡಿಸಿದ್ದಾರೆ. ಅವರೆಲ್ಲರ ಸಹಕಾರದಿಂದ ಈ ಹೊತ್ತಿಗೆ ತಿಮ್ಮಪ್ಪನಿಗೆ ಸಮರ್ಪಣೆ ಆಗುವಂತಾಗಿದೆ. ಅವರೆಲ್ಲರಿಗೂ ಶ್ರೀಕೃಷ್ಣ-ಮುಖ್ಯಪ್ರಾಣರ ಅನುಗ್ರಹದ ರಕ್ಷೆ ಇರಲೆಂದು ಪ್ರಾರ್ಥಿಸುತ್ತೇವೆ.

ನಾರಾಯಣ ಸ್ಮರಣೆಗಳು

**ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದಂಗಳವರು**

ಶ್ರೀ ಪಲಿಮಾರು ಹೃಷೀಕೇಶ ಮಠ, ಉಡುಪಿ.

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

**ಪರಮಪೂಜ್ಯ ಶ್ರೀಶ್ರೀವಿಶ್ವವಲ್ಲಭತೀರ್ಥ ಶ್ರೀಪಾದರು**

ಸೋದೆ ಶ್ರೀ ವಾದಿರಾಜ ಮಠ, ರಥಬೀದಿ, ಉಡುಪಿ.

---

# ಅನುಗ್ರಹ ಸಂದೇಶ

ಕುರುಡನಿಗೂ ದೂರದ ದರ್ಶನ ಮಾಡಿಸಿದ ಶಕ್ತಿ ವೇದವ್ಯಾಸರದ್ದು. ಕೃಮಿಯನ್ನೂ ರಾಜನನ್ನಾಗಿಸಿದ ಶಕ್ತಿ ಅವರದ್ದು. ಮರಣಾಸನ್ನರಿಗೂ ಜೀವನವನ್ನು ನೀಡಿದ ಶಕ್ತಿ ಅವರದ್ದು. ಅವರಂತೆ ಅವರ ಗ್ರಂಥಕ್ಕೂ ಮಿಗಿಲಾದ ಸಾಮರ್ಥ್ಯವಿದೆ. ಸಂಸಾರದ ದುಃಖವೈತರಣಿಯಲ್ಲಿ ಮುಳುಗಿದವರು ಅವರ ಗ್ರಂಥದ ಮನನದಿಂದ ಆನಂದ ಕ್ಷೀರಸಮುದ್ರದಲ್ಲಿ ವಿಹರಿಸುತ್ತಾರೆ. ಆ ಗ್ರಂಥಗಳಲ್ಲೂ ಮಹಾಭಾರತ ಮಿಗಿಲಾದದ್ದು. 'ವೇದಾದಪಿ ಪರಂ ಚಕ್ರೇ ಮಹಾಭಾರತಮುತ್ತಮಮ್' ವೇದಪ್ರತಿಪಾದ್ಯ ರಚಿಸಿದ ಕೃತಿ ವೇದಗಳಿಗಿಂತಲೂ ಮಿಗಿಲಾಗಿದೆ. ಜೀವನದುದ್ದಕ್ಕೂ ಬೇಕಾಗುವ ನೀತಿ, ಸಂಪತ್ತು, ಧರ್ಮ, ಕಾಮ, ವ್ಯವಹಾರ ಎಲ್ಲವನ್ನೂ ಆಖ್ಯಾನ, ಉಪಾಖ್ಯಾನಗಳ ಮುಖಾಂತರ ತಿಳಿಹೇಳಿ ಪರಲೋಕದ ಸಾಧನೆಯನ್ನೂ ಬೋಧಿಸುವ 'ವಿಜ್ಞಾನದೀಪ' ಇದು. 'ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್'. ಇಲ್ಲಿ ಇರುವುದೇ ಬೇರಡೆ ಇದೆ. ಇಲ್ಲಿ ಇಲ್ಲದ್ದು ಎಲ್ಲೂ ಇಲ್ಲ ಎನ್ನುವ ಮಾತನ್ನು ಸ್ವತಃ ವ್ಯಾಸರೇ ಹೇಳಿದ್ದಾರೆ. ಪಾತ್ರಗಳು ತಾತ್ಕಾಲಿಕವಾದರೂ ಹೆಜ್ಜೆ ಹೆಜ್ಜೆಗೆ ಮೂಡುವ ಸಂದೇಶ ಸಾರ್ವಕಾಲಿಕ.

ಇಂತಹ ಮಹಾಭಾರತವೆಂಬ ಮೇರುಕೃತಿ ಇದ್ದರೂ ಶುದ್ಧಪಾಠ ನಮಗೆ ಉಪಲಬ್ಧವಾಗಿರಲಿಲ್ಲ. ವೇದವ್ಯಾಸದೇವರ ಆದೇಶದಂತೆ ಮಹಾಭಾರತ ಗ್ರಂಥಕ್ಕೆ ಶ್ಲೋಕರೂಪದಲ್ಲಿ ವ್ಯಾಖ್ಯಾನ ಮಾಡಿದ ಶ್ರೀಮದಾಚಾರ್ಯರು ಪ್ರಕ್ಷೇಪ ವಿಕ್ಷೇಪಗಳಿಂದ ಕೋಟ್ಯಂಶವೂ ಉಪಲಬ್ಧವಾಗುವುದಿಲ್ಲ. ನಾನು ಅನೇಕ ಪ್ರದೇಶಗಳಲ್ಲಿರುವ ಪಾಠಗಳನ್ನು ಶೋಧಿಸಿ ಈ ವ್ಯಾಖ್ಯಾನಕ್ಕೆ ಮುಂದಾಗಿದ್ದೇನೆ ಎಂದು ಹೇಳಿದ್ದಾರೆ. 'ಸ್ವಯಂ ವ್ಯಾಸೋ ಹಿ ತದ್ವೇದ ಬ್ರಹ್ಮಾ ವಾ ತತ್ಪ್ರಸಾದತಃ' ಎಂದು ತಿಳಿಸಿದಂತೆ ಗ್ರಂಥವನ್ನು ಬರೆದ ವೇದವ್ಯಾಸರೇ ಬಲ್ಲವರು. ಅವರ ಅನುಗ್ರಹದಿಂದ ಬ್ರಹ್ಮದೇವರು ತಿಳಿದಿದ್ದಾರೆ. ಇಂತಹ ಲೋಕೋದ್ಧಾರಕವಾದ

ಗ್ರಂಥರತ್ನದ ರಕ್ಷಣೆ ಬೋಧನೆಗಾಗಿಯೇ ಇಬ್ಬರು ಭಾವಿಬ್ರಹ್ಮರು ವ್ಯಾಖ್ಯಾನಿಸಿದ್ದಾರೆ. ಶ್ರೀಮದಾಚಾರ್ಯರು 'ಮಹಾಭಾರತತಾತ್ಪರ್ಯನಿರ್ಣಯ' ಹಾಗೂ 'ಯಮಕಭಾರತ' ಎಂಬ ಎರಡು ಗ್ರಂಥಗಳನ್ನು ನೀಡಿದರೆ ಶ್ರೀವಾದಿರಾಜ ಗುರುಸಾರ್ವಭೌಮರು 'ಲಕ್ಷಾಲಂಕಾರ'ವನ್ನು ನೀಡಿದ್ದಾರೆ. ಈ ಸರ್ವಜ್ಞರ ಕೃತಿಗಳನ್ನು ಆಧರಿಸಿ ಶೋಧಿಸಿದರೆ ಮಾತ್ರ ನಮಗೆ ಶುದ್ಧಪಾಠ ದೊರೆಯಲು ಸಾಧ್ಯ.

ಈ ನಿಟ್ಟಿನಲ್ಲಿ ಅನೇಕರು ಪ್ರಯತ್ನಿಸಿ ವಿಫಲರಾಗಿದ್ದಾರೆ. ನಮ್ಮ ಪಲಿಮಾರು ಮಠಾಧೀಶರಾದ ಶ್ರೀ ಶ್ರೀ ವಿದ್ಯಾಧೀಶತೀರ್ಥರು ಭಗೀರಥನಂತೆ ಬೆಂಬಿಡದ ಪ್ರಯತ್ನದಿಂದ ಸಾಧಿಸಿದ್ದಾರೆ. ಅನೇಕ ವಿದ್ವಾಂಸರ ಮುಖಾಂತರ ಪ್ರಾಚ್ಯಲಿಪಿಗಳನ್ನು ಪರಿಶೀಲಿಸಿ ಶುದ್ಧಪಾಠವನ್ನು ನೀಡುತ್ತಿದ್ದಾರೆ. ಜೊತೆಗೆ ತಾತ್ಪರ್ಯನಿರ್ಣಯ ಹಾಗೂ ಲಕ್ಷಾಲಂಕಾರಗಳನ್ನೂ ನೀಡುತ್ತಿದ್ದಾರೆ. ಎಲ್ಲ ಸಜ್ಜನರೂ ಈ ಗ್ರಂಥರತ್ನದ ಉಪಕಾರವನ್ನು ಪಡೆಯಲಿ ಎಂದು ನಮ್ಮ ಆರಾಧ್ಯಮೂರ್ತಿಯಾದ ಮಧ್ವವಾದಿರಾಜವರದ ಭೂವರಾಹ-ಹಯಗ್ರೀವ-ವೇದವ್ಯಾಸ ದೇವರಲ್ಲಿ ಪ್ರಾರ್ಥಿಸುತ್ತಿದ್ದೇವೆ.

ಇತ್ಯನೇಕ ಶ್ರೀಮನ್ನಾರಾಯಣ ಸ್ಮರಣೆಗಳು

ಶ್ರೀ ಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದಂಗಳವರು
ಶ್ರೀಸೋದೆ ವಾದಿರಾಜ ಮಠ, ಉಡುಪಿ.

# ಮಹಾಭಾರತದ ಹಿರಿಮೆ

ಶ್ರೀಮಹಾಭಾರತವು ಬಾದರಾಯಣರಿಂದ ರಚಿತವಾದುದು. ತಾವು ಅವತಾರ ಮಾಡಿದ ಮೂರು ವರ್ಷಗಳ ನಂತರ ಬಾದರಾಯಣರು ಎಂದರೆ ವೇದವ್ಯಾಸರು ಈ ಗ್ರಂಥವನ್ನು ರಚಿಸಿದರೆಂದು ಪುರಾಣಗಳಿಂದ ತಿಳಿದುಬರುತ್ತದೆ. ಮಹಾಭಾರತದ ಆದಿಪರ್ವದಲ್ಲಿಯೇ **'ಕೋ ಹ್ಯನ್ಯಃ ಪುಂಡರೀಕಾಕ್ಷಾತ್ ಮಹಾಭಾರತಕೃದ್ ಭವೇತ್'** ಪುಂಡರೀಕಾಕ್ಷನನ್ನು ಬಿಟ್ಟು ಬೇರೆ ಯಾರು ಮಹಾಭಾರತವನ್ನು ರಚಿಸಲು ಸಾಧ್ಯ ಎಂಬ ಉದ್ಗಾರವಿದೆ. ಮಹಾಭಾರತದ ಪ್ರಶಂಸೆಯು ಪುರಾಣಾದಿಗಳಲ್ಲಿ ಮತ್ತೆ ಮತ್ತೆ ಕೇಳಿಬರುತ್ತದೆ.

**ಲೋಕೇಶಾ ಬ್ರಹ್ಮರುದ್ರಾದ್ಯಾಃ ಸಂಸಾರೇ ಕ್ಲೇಶಿನಂ ಜನಮ್ ।**
**ವೇದಾರ್ಥಾಜ್ಞಮಧೀಕಾರವರ್ಜಿತಂ ಚ ಸ್ತ್ರಿಯಾದಿಕಮ್ ॥**
**ಅವೇಕ್ಷ್ಯ ಪ್ರಾರ್ಥಯಾಮಾಸುಃ ದೇವೇಶಂ ಪುರುಷೋತ್ತಮಂ ।**
**ತತಃ ಪ್ರಸನ್ನೋ ಭಗವಾನ್ ವ್ಯಾಸೋ ಭೂತ್ವಾ ಚ ತೇನ ಚ ॥**
**ಅನ್ಯಾವತಾರರೂಪೈಶ್ಚ ವೇದಾನುಕ್ತಾರ್ಥಭೂಷಿತಂ ।**
**ಕೇವಲೇನಾತ್ಮಬೋಧೇನ ದೃಷ್ಟಂ ವೇದಾರ್ಥಸಂಯುತಂ ।**
**ವೇದಾದಪಿ ಪರಂ ಚಕ್ರೇ ಪಂಚಮಂ ವೇದಮುತ್ತಮಂ ॥**

–ನಾರಾಯಣಾಷ್ಟಾಕ್ಷರ ಕಲ್ಪ (ಗೀ.ಭಾ)

ಲೋಕೇಶರಾದ ಬ್ರಹ್ಮರುದ್ರಾದಿಗಳು ಅಧಿಕಾರಹೀನರಾಗಿ ವೇದಾರ್ಥವನ್ನು ತಿಳಿಯದೆ ಸಂಸಾರದಲ್ಲಿ ಕ್ಲೇಶಪಡುವ ವನಿತಾದಿ ಅಧಿಕಾರಿಗಳನ್ನು ನೋಡಿ ಅವರ ಮೇಲಿನ ಅನುಕಂಪೆಯಿಂದ ದೇವೇಶನಾದ ಪುರುಷೋತ್ತಮನನ್ನು ಪ್ರಾರ್ಥಿಸಿದರು. ಆಗ ಪ್ರಸನ್ನನಾದ ಭಗವಂತನು ವ್ಯಾಸರೂಪದಿಂದ ಅವತಾರ ಮಾಡಿ ವೇದದಲ್ಲಿಯೂ ಹೇಳದಿರುವ ಅರ್ಥಗಳಿಂದ ಭೂಷಿತವಾದ, ಕೇವಲ ತನ್ನ ಜ್ಞಾನಕ್ಕೆ ವಿಷಯವಾದ, ವೇದಾರ್ಥಕ್ಕೆ ಅವಿರೋಧಿಯಾದ, ಅನೇಕ ಅರ್ಥಗಳಿಂದ ಕೂಡಿರುವ ಪಂಚಮವೇದವೆಂದು ಕರೆಯಲ್ಪಡುವ ವೇದಗಳಿಗಿಂತಲೂ ಉತ್ತಮವಾದ ಶ್ರೇಷ್ಠವಾದ ಮಹಾಭಾರತವನ್ನು ರಚಿಸಿದನು ಎಂದು ನಾರಾಯಣಾಷ್ಟಾಕ್ಷರಕಲ್ಪದಲ್ಲಿ ಹೇಳಿದೆ.

**ಬ್ರಹ್ಮಾದ್ಯೈಃ ಪ್ರಾರ್ಥಿತೋ ವಿಷ್ಣುರ್ಭಾರತಂ ಸ ಚಕಾರ ಹ ।**
**ಯಸ್ಮಿನ್ ದಶಾರ್ಥಾಃ ಸರ್ವತ್ರ ನ ಜ್ಞೇಯಾಃ ಸರ್ವಜಂತುಭಿಃ ॥**

– ನಾರದೀಯ (ಗೀ.ಭಾ)

ಗ್ರಂಥರತ್ನದ ರಕ್ಷಣೆ ಬೋಧನೆಗಾಗಿಯೇ ಇಬ್ಬರು ಭಾವಿಬ್ರಹ್ಮರು ವ್ಯಾಖ್ಯಾನಿಸಿದ್ದಾರೆ. ಶ್ರೀಮದಾಚಾರ್ಯರು 'ಮಹಾಭಾರತತಾತ್ಪರ್ಯನಿರ್ಣಯ' ಹಾಗೂ 'ಯಮಕಭಾರತ' ಎಂಬ ಎರಡು ಗ್ರಂಥಗಳನ್ನು ನೀಡಿದರೆ ಶ್ರೀವಾದಿರಾಜ ಗುರುಸಾರ್ವಭೌಮರು 'ಲಕ್ಷಾಲಂಕಾರ'ವನ್ನು ನೀಡಿದ್ದಾರೆ. ಈ ಸರ್ವಜ್ಞರ ಕೃತಿಗಳನ್ನು ಆಧರಿಸಿ ಶೋಧಿಸಿದರೆ ಮಾತ್ರ ನಮಗೆ ಶುದ್ಧಪಾಠ ದೊರೆಯಲು ಸಾಧ್ಯ.

ಈ ನಿಟ್ಟಿನಲ್ಲಿ ಅನೇಕರು ಪ್ರಯತ್ನಿಸಿ ವಿಫಲರಾಗಿದ್ದಾರೆ. ನಮ್ಮ ಪಲಿಮಾರು ಮಠಾಧೀಶರಾದ ಶ್ರೀ ಶ್ರೀ ವಿದ್ಯಾಧೀಶತೀರ್ಥರು ಭಗೀರಥನಂತೆ ಬೆಂಬಿಡದ ಪ್ರಯತ್ನದಿಂದ ಸಾಧಿಸಿದ್ದಾರೆ. ಅನೇಕ ವಿದ್ವಾಂಸರ ಮುಖಾಂತರ ಪ್ರಾಚ್ಯಲಿಪಿಗಳನ್ನು ಪರಿಶೀಲಿಸಿ ಶುದ್ಧಪಾಠವನ್ನು ನೀಡುತ್ತಿದ್ದಾರೆ. ಜೊತೆಗೆ ತಾತ್ಪರ್ಯನಿರ್ಣಯ ಹಾಗೂ ಲಕ್ಷಾಲಂಕಾರಗಳನ್ನೂ ನೀಡುತ್ತಿದ್ದಾರೆ. ಎಲ್ಲ ಸಜ್ಜನರೂ ಈ ಗ್ರಂಥರತ್ನದ ಉಪಕಾರವನ್ನು ಪಡೆಯಲಿ ಎಂದು ನಮ್ಮ ಆರಾಧ್ಯಮೂರ್ತಿಯಾದ ಮಧ್ವವಾದಿರಾಜವರದ ಭೂವರಾಹ-ಹಯಗ್ರೀವ-ವೇದವ್ಯಾಸ ದೇವರಲ್ಲಿ ಪ್ರಾರ್ಥಿಸುತ್ತಿದ್ದೇವೆ.

ಇತ್ಯನೇಕ ಶ್ರೀಮನ್ನಾರಾಯಣ ಸ್ಮರಣೆಗಳು

ಶ್ರೀ ಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದಂಗಳವರು
ಶ್ರೀಸೋದೆ ವಾದಿರಾಜ ಮಠ, ಉಡುಪಿ.

# ಮಹಾಭಾರತದ ಹಿರಿಮೆ

ಶ್ರೀಮಹಾಭಾರತವು ಬಾದರಾಯಣರಿಂದ ರಚಿತವಾದುದು. ತಾವು ಅವತಾರ ಮಾಡಿದ ಮೂರು ವರ್ಷಗಳ ನಂತರ ಬಾದರಾಯಣರು ಎಂದರೆ ವೇದವ್ಯಾಸರು ಈ ಗ್ರಂಥವನ್ನು ರಚಿಸಿದರೆಂದು ಪುರಾಣಗಳಿಂದ ತಿಳಿದುಬರುತ್ತದೆ. ಮಹಾಭಾರತದ ಆದಿಪರ್ವದಲ್ಲಿಯೇ **'ಕೋ ಹ್ಯನ್ಯಃ ಪುಂಡರೀಕಾಕ್ಷಾತ್ ಮಹಾಭಾರತಕೃದ್ ಭವೇತ್'** ಪುಂಡರೀಕಾಕ್ಷನನ್ನು ಬಿಟ್ಟು ಬೇರೆ ಯಾರು ಮಹಾಭಾರತವನ್ನು ರಚಿಸಲು ಸಾಧ್ಯ ಎಂಬ ಉದ್ಗಾರವಿದೆ. ಮಹಾಭಾರತದ ಪ್ರಶಂಸೆಯು ಪುರಾಣಾದಿಗಳಲ್ಲಿ ಮತ್ತೆ ಮತ್ತೆ ಕೇಳಿಬರುತ್ತದೆ.

**ಲೋಕೇಶಾ ಬ್ರಹ್ಮರುದ್ರಾದ್ಯಾಃ ಸಂಸಾರೇ ಕ್ಲೇಶಿನಂ ಜನಮ್ ।**
**ವೇದಾರ್ಥಾಜ್ಞಮಧೀಕಾರವರ್ಜಿತಂ ಚ ಸ್ತ್ರಿಯಾದಿಕಮ್ ॥**
**ಅವೇಕ್ಷ್ಯ ಪ್ರಾರ್ಥಯಾಮಾಸುಃ ದೇವೇಶಂ ಪುರುಷೋತ್ತಮಂ ।**
**ತತಃ ಪ್ರಸನ್ನೋ ಭಗವಾನ್ ವ್ಯಾಸೋ ಭೂತ್ವಾ ಚ ತೇನ ಚ ॥**
**ಅನ್ಯಾವತಾರರೂಪೈಶ್ಚ ವೇದಾನುಕ್ತಾರ್ಥಭೂಷಿತಂ ।**
**ಕೇವಲೇನಾತ್ಮಬೋಧೇನ ದೃಷ್ಟಂ ವೇದಾರ್ಥಸಂಯುತಂ ।**
**ವೇದಾದಪಿ ಪರಂ ಚಕ್ರೇ ಪಂಚಮಂ ವೇದಮುತ್ತಮಂ ॥**

-ನಾರಾಯಣಾಷ್ಟಾಕ್ಷರ ಕಲ್ಪ (ಗೀ.ಭಾ)

ಲೋಕೇಶರಾದ ಬ್ರಹ್ಮರುದ್ರಾದಿಗಳು ಅಧಿಕಾರಹೀನರಾಗಿ ವೇದಾರ್ಥವನ್ನು ತಿಳಿಯದೆ ಸಂಸಾರದಲ್ಲಿ ಕ್ಲೇಶಪಡುವ ವನಿತಾದಿ ಅಧಿಕಾರಿಗಳನ್ನು ನೋಡಿ ಅವರ ಮೇಲಿನ ಅನುಕಂಪೆಯಿಂದ ದೇವೇಶನಾದ ಪುರುಷೋತ್ತಮನನ್ನು ಪ್ರಾರ್ಥಿಸಿದರು. ಆಗ ಪ್ರಸನ್ನನಾದ ಭಗವಂತನು ವ್ಯಾಸರೂಪದಿಂದ ಅವತಾರ ಮಾಡಿ ವೇದದಲ್ಲಿಯೂ ಹೇಳದಿರುವ ಅರ್ಥಗಳಿಂದ ಭೂಷಿತವಾದ, ಕೇವಲ ತನ್ನ ಜ್ಞಾನಕ್ಕೆ ವಿಷಯವಾದ, ವೇದಾರ್ಥಕ್ಕೆ ಅವಿರೋಧಿಯಾದ, ಅನೇಕ ಅರ್ಥಗಳಿಂದ ಕೂಡಿರುವ ಪಂಚಮವೇದವೆಂದು ಕರೆಯಲ್ಪಡುವ ವೇದಗಳಿಗಿಂತಲೂ ಉತ್ತಮವಾದ ಶ್ರೇಷ್ಠವಾದ ಮಹಾಭಾರತವನ್ನು ರಚಿಸಿದನು ಎಂದು ನಾರಾಯಣಾಷ್ಟಾಕ್ಷರಕಲ್ಪದಲ್ಲಿ ಹೇಳಿದೆ.

**ಬ್ರಹ್ಮಾದ್ಯೈಃ ಪ್ರಾರ್ಥಿತೋ ವಿಷ್ಣುರ್ಭಾರತಂ ಸ ಚಕಾರ ಹ ।**
**ಯಸ್ಮಿನ್ ದಶಾರ್ಥಾಃ ಸರ್ವತ್ರ ನ ಜ್ಞೇಯಾಃ ಸರ್ವಜಂತುಭಿಃ ॥**

- ನಾರದೀಯ (ಗೀ.ಭಾ)

ಬ್ರಹ್ಮಾದಿಗಳಿಂದ ಪ್ರಾರ್ಥಿತನಾದ ವಿಷ್ಣುವು ಎಲ್ಲರ ಬುದ್ಧಿಗೂ ಗೋಚರವಾಗದ ಹತ್ತು ಅರ್ಥಗಳನ್ನು ಸರ್ವತ್ರ ಹೊಂದಿರುವ ಭಾರತವನ್ನು ರಚಿಸಿದನು ಎಂದು ನಾರದೀಯ ಪುರಾಣದಲ್ಲಿ ಹೇಳಿದೆ.

**ಭಾರತಂ ಚಾಪಿ ಕೃತವಾನ್ ಪಂಚಮಂ ವೇದಮುತ್ತಮಂ ।**
**ದಶಾವರಾರ್ಥಂ ಸರ್ವತ್ರ ಕೇವಲಂ ವಿಷ್ಣುಬೋಧಕಂ ।**
**ಪರೋಕ್ಷಾರ್ಥಂ ತು ಸರ್ವತ್ರ ವೇದಾದಪ್ಯುತ್ತಮಂ ತು ಯತ್ ॥**

- ಸ್ಕಾಂದೇ (ಗೀ.ಭಾ)

ವೇದವ್ಯಾಸರು ಸರ್ವತ್ರ ಕನಿಷ್ಠ ಹತ್ತು ಅರ್ಥಗಳಿಂದ ಕೂಡಿರುವ ಕೇವಲ ವಿಷ್ಣು ಬೋಧಕವಾದ ಸರ್ವತ್ರ ಪರೋಕ್ಷಾರ್ಥ (ಸಾಂಕೇತಿಕಾರ್ಥ)ವನ್ನುಳ್ಳ ವೇದಗಳಿಗಿಂತಲೂ ಶ್ರೇಷ್ಠವಾದ ಮಹಾಭಾರತವನ್ನು ರಚಿಸಿದರು ಎಂದು ಸ್ಕಾಂದಪುರಾಣದಲ್ಲಿ ಹೇಳಲಾಗಿದೆ.

**ಮಹತ್ವಾದ್ ಭಾರವತ್ವಾಚ್ಚ ಮಹಾಭಾರತಮುಚ್ಯತೇ ।**
**ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ ।**
**ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥**

- ಭಾರತೇ (ಗೀ.ಭಾ)

ಗಾತ್ರದ ಮಹತ್ವದಿಂದಲೂ ಅರ್ಥಗೌರವದಿಂದಲೂ ಕೂಡಿರುವುದರಿಂದ ಇದಕ್ಕೆ ಮಹಾಭಾರತವೆಂದು ಹೆಸರು. ಯಾವನು ಈ ಮಹಾಭಾರತ ಶಬ್ದದ ನಿರ್ವಚನವನ್ನು ತಿಳಿಯುತ್ತಾನೆಯೋ ಅವನು ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ.

**ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ ಕ್ವಚಿತ್ ॥**

ಈ ಮಹಾಭಾರತದಲ್ಲಿರುವುದೇ ಬೇರೆ ಗ್ರಂಥಗಳಲ್ಲಿಯೂ ಇದೆ. ಇಲ್ಲಿ ಇಲ್ಲದಿರುವುದು ಎಲ್ಲಿಯೂ ಇಲ್ಲ ಎಂದು ಭಾರತದಲ್ಲಿಯೇ ಹೇಳಲ್ಪಟ್ಟಿದೆ.

**ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ ।**
**ವಿಷ್ಣೋಃ ಸಹಸ್ರನಾಮಾಪಿ ಜ್ಞೇಯಂ ಪಾಠ್ಯಂ ಚ ತದ್ ದ್ವಯಂ ॥**

- ಮಹಾಕೌರ್ಮೇ (ಗೀ.ಭಾ)

ಎಲ್ಲ ಶಾಸ್ತ್ರಗಳಲ್ಲಿಯೂ ಭಾರತವು ಶ್ರೇಷ್ಠವಾದುದು. ಅದರಲ್ಲಿಯೂ ಭಗವದ್ಗೀತೆ ಮತ್ತು ವಿಷ್ಣುಸಹಸ್ರನಾಮವು ಅಧ್ಯಯನ ಮತ್ತು ಪಾರಾಯಣ ಮಾಡಲ್ಪಡಬೇಕಾದವು ಎಂದು ಮಹಾಕೂರ್ಮಪುರಾಣದಲ್ಲಿ ಹೇಳಿದೆ.

**ನಿರ್ಣಯಃ ಸರ್ವಶಾಸ್ತ್ರಾಣಾಂ ಭಾರತಂ ಪರಿಕೀರ್ತಿತಂ ।**
**ಭಾರತಾನ್ನವಿರಾಗಾಯ ಭಾರತಾನ್ನ ವಿಮುಕ್ತಯೇ ॥**

– ಬ್ರಹ್ಮಾಂಡೇ

ಎಲ್ಲಾ ಶಾಸ್ತ್ರಗಳಲ್ಲಿ ಹೇಳಿರುವ ಪ್ರಮೇಯಗಳ ನಿರ್ಣಯವು ಭಾರತದಲ್ಲಿ ಉಂಟಾಗುತ್ತದೆ. ವೈರಾಗ್ಯವನ್ನು ಸಂಪಾದಿಸಲು ಮತ್ತು ಮೋಕ್ಷವನ್ನು ಪಡೆಯಲು ಭಾರತಕ್ಕಿಂತ ಶ್ರೇಷ್ಠವಾದ ಗ್ರಂಥವಿಲ್ಲ ಎಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಲಾಗಿದೆ.

**ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।**
**ಬಿಭೇತ್ಯಲ್ಪಶ್ರುತಾದ್ ವೇದೋ ಮಾಮಯಂ ಪ್ರಚಲಿಷ್ಯತಿ ॥**

– ಭಾರತೇ (ಗೀ.ಭಾ)

ಇತಿಹಾಸ ಪುರಾಣಗಳಿಂದ ವೇದದ ಅರ್ಥವನ್ನು ತಿಳಿಯಬೇಕು. ಅಲ್ಪ ಶ್ರುತನಾದವನು ವೇದಕ್ಕೆ ಅರ್ಥವನ್ನು ಮಾಡಲು ಹೊರಟರೆ ಇವನು ನನಗೆ ಅಪಾರ್ಥವನ್ನು ಮಾಡುತ್ತಾನೆಂದು ವೇದವೇ ಹೆದರುತ್ತದೆ ಎಂದು ಭಾರತದಲ್ಲಿಯೇ ಹೇಳಿದೆ. ಇತಿಹಾಸವೆಂದು ಕರೆಯುವುದು ಭಾರತವನ್ನೇ.

ಈ ಎಲ್ಲಾ ಪ್ರಮಾಣ ವಾಕ್ಯಗಳಿಂದ ಮಹಾಭಾರತದ ಮಹತ್ತ್ವವು ತಿಳಿದುಬರುತ್ತದೆ. ಅಂತಹ ಮಹಾಭಾರತದ ಅಧ್ಯಯನವು ಅತ್ಯಂತ ಅವಶ್ಯಕವೆಂಬುದು ನಿರ್ಗಲಿತವಾದ ಅರ್ಥವಾಗಿದೆ.

## ಸಂಶೋಧನೆಯ ಕುರಿತು

ಇಂತಹ ಮಹಾಭಾರತವು ಇದುವರೆಗೆ ಅನೇಕಬಾರಿ ಮುದ್ರಣವನ್ನು ಹೊಂದಿದೆ. ಇದರಲ್ಲಿ ಮುಖ್ಯವಾಗಿ ಔತ್ತರೇಯ ಪಾಠ ಮತ್ತೂ ದಾಕ್ಷಿಣಾತ್ಯಪಾಠ ಎಂದು ಎರಡು ಪಾಠಗಳಿವೆ. ಔತ್ತರೇಯಪಾಠವು ಗೋರಖಪುರದ ಗೀತಾ ಪ್ರೆಸ್ ಮೊದಲಾದ ಸಂಸ್ಥೆಗಳಿಂದ ಮುದ್ರಿತವಾಗಿದೆ. ದಾಕ್ಷಿಣಾತ್ಯಪಾಠವು ಮದ್ರಾಸಿನ ವಾವಿಳ್ಳಿ ರಾಮಸ್ವಾಮಿ-ಯವರಿಂದಲೂ, ಕುಂಭಕೋಣದ ಟಿ.ಆರ್. ಕೃಷ್ಣಾಚಾರ್ಯರಿಂದಲೂ ಮತ್ತು ಇನ್ನೂ ಕೆಲವರಿಂದಲೂ ಮುದ್ರಿತವಾಗಿದೆ. ಪುಣೆಯ ಭಂಡಾರಕರ ಸಂಶೋಧನಾ ಸಂಸ್ಥೆಯು ತಮಗೆ ಸಿಕ್ಕಿದ ಎಲ್ಲಾ ಪಾಠಗಳನ್ನೂ ಸಂಕಲನ ಮಾಡಿ ಸಂಶೋಧನೆಯ ಆವೃತ್ತಿ ಮತ್ತು ಜನಪ್ರಿಯ ಆವೃತ್ತಿ ಎಂದು ಎರಡು ಆವೃತ್ತಿಗಳನ್ನು ಹೊರಗೆ ತಂದಿದ್ದಾರೆ. ಆದರೆ ಇದುವರೆಗೆ ಮುದ್ರಿತವಾಗಿರುವ ಯಾವ ಆವೃತ್ತಿಯೂ ಶುದ್ಧವಾಗಿಲ್ಲ ಎಂದು ಮುಂದೆ ಹೇಳುವ ಕಾರಣಗಳಿಂದ ತಿಳಿದುಬರುತ್ತದೆ.

ಮಹಾಭಾರತದಲ್ಲಿ ಎರಡುಸಾವಿರ ಅಧ್ಯಾಯಗಳೂ ಮತ್ತು ಒಂದು ಲಕ್ಷ ಶ್ಲೋಕಗಳೂ ಇವೆ ಎಂದು ಆದಿಪರ್ವದಲ್ಲಿಯೇ ಉಲ್ಲೇಖವಿದೆ. ಶ್ರೀವಾದಿರಾಜರು ಲಕ್ಷಾಲಂಕಾರದಲ್ಲಿ ಒಂದು ಲಕ್ಷಕ್ಕಿಂತ ೩೧೩೪ ಶ್ಲೋಕಗಳು ಅಧಿಕ ಇವೆ. ಸ್ಥೂಲಾಭಿಪ್ರಾಯದಿಂದ ಒಂದು ಲಕ್ಷ ಎಂದು ಗಣನೆ ಎಂದು ಹೇಳಿದ್ದಾರೆ. ಆದರೆ ಮುದ್ರಿತವಾದ ಯಾವ ಪುಸ್ತಕದಲ್ಲಿಯೂ ಒಂದು ಲಕ್ಷ ಶ್ಲೋಕಗಳು ದೊರಕುವುದಿಲ್ಲ. ಎಲ್ಲಾ ಪುಸ್ತಕಗಳಲ್ಲಿಯೂ ಸಾಧಾರಣವಾಗಿ ೯೩,೦೦೦ ರಿಂದ ೯೫,೦೦೦ ಶ್ಲೋಕಗಳವರೆಗೆ ದೊರೆಯುತ್ತವೆ. ಕುಂಭಕೋಣದ ಕೃಷ್ಣಾಚಾರ್ಯರ ಪುಸ್ತಕದಲ್ಲಿ ಸುಮಾರು ೧,೨೩,೦೦೦ ಶ್ಲೋಕಗಳು ಸಿಗುತ್ತವೆ. ಆದ್ದರಿಂದ ಉಳಿದ ಪ್ರತಿಗಳಲ್ಲಿ ೫,೦೦೦-೭,೦೦೦ ಶ್ಲೋಕಗಳು ಲುಪ್ತವಾಗಿರಬಹುದಾದರೂ ಕುಂಭಕೋಣ ಪ್ರತಿಯಲ್ಲಿ ೨೦,೦೦೦ ಶ್ಲೋಕಗಳು ಜಾಸ್ತಿಯಾಗಿ ಸೇರಿಕೊಂಡಿವೆ. ಆದ್ದರಿಂದ ಅದರಲ್ಲಿ ಸಾಕಷ್ಟು ಪ್ರಕ್ಷಿಪ್ತ ಶ್ಲೋಕಗಳು ಇರಲೇಬೇಕು. ಯಾವುದು ಪ್ರಕ್ಷಿಪ್ತ ಯಾವುದು ಶುದ್ಧ ಎಂದು ನಿರ್ಣಯಿಸುವುದು ಕಷ್ಟವಾದರೂ ಮಹಾಭಾರತದಲ್ಲಿ ಇಲ್ಲದಿರುವ ಯಾವುದೋ ೨೦,೦೦೦ ಶ್ಲೋಕಗಳು ಅದರಲ್ಲಿ ಸೇರಿಕೊಂಡಿವೆ ಎಂಬ ವಿಷಯದಲ್ಲಿ ಸಂಶಯವಿಲ್ಲ. ಈಗ ನಾವು ಪ್ರಕಾಶನ ಮಾಡಲು ಹೊರಟಿರುವ ಪುಸ್ತಕದಲ್ಲಿಯೂ ಸಹ ಪರ್ವಸಂಗ್ರಹ ಪರ್ವದಲ್ಲಿ ಹೇಳಿರುವ ಸಂಖ್ಯೆಗಳಿಂದ ಒಟ್ಟು ೯೬,೮೩೦ ಶ್ಲೋಕಗಳಾಗುತ್ತವೆ. ಆಗಲೂ ೧,೩೦೦ ಶ್ಲೋಕಗಳು ಕಡಿಮೆಯಾಗುತ್ತವೆ. ಪೂರ್ಣವಾಗಿ ಶೋಧನೆ ಮಾಡಿ ಪ್ರಕಟಿಸಿದ ಮೇಲೆ ಇದೇ ಸಂಖ್ಯೆಯು ಸರಿಯಾಗಿ ಬರುತ್ತದೆಯೋ ಅಥವಾ ಅದರಲ್ಲಿ ಹೆಚ್ಚು ಕಡಿಮೆ ಆಗುತ್ತದೆಯೋ ನೋಡಬೇಕು. ಆದ್ದರಿಂದ ಈಗ ನಾವು ಶೋಧಿಸಿ ಪ್ರಕಾಶಿಸುತ್ತಿರುವ ಪಾಠವೂ ಸಹ ನೂರಕ್ಕೆ ನೂರರಷ್ಟು ಶುದ್ಧ ಎಂದು ಹೇಳುವ ಧೈರ್ಯವು ನಮಗೂ ಇಲ್ಲ. ಆದರೆ ಉಳಿದೆಲ್ಲಾ ಪ್ರತಿಗಳಿಗಿಂತ ಹೆಚ್ಚು ಶುದ್ಧವಾದುದು ಎಂದು ಮಾತ್ರ ಹೇಳಬಹುದು. ಇದಕ್ಕೆ ಕಾರಣಗಳನ್ನು ಮುಂದೆ ಕೊಡಲಾಗುತ್ತದೆ.

ಮಹಾಭಾರತದ ಪಾಠವು ಆಚಾರ್ಯರ ಕಾಲಕ್ಕೇ ಅಶುದ್ಧವಾಗಿತ್ತೆಂಬ ಅಂಶವು ಆಚಾರ್ಯರ ಮಹಾಭಾರತ ತಾತ್ಪರ್ಯನಿರ್ಣಯದಿಂದ ತಿಳಿದುಬರುತ್ತದೆ.

**ಕ್ವಚಿದ್ ಗ್ರಂಥಾನ್ ಪ್ರಕ್ಷಿಪಂತಿ ಕ್ವಚಿದಂತರಿತಾನಪಿ ।**
**ಕುರ್ಯುಃ ಕ್ವಚಿಚ್ಚ ವ್ಯತ್ಯಾಸಂ ಪ್ರಮಾದಾತ್ ಕ್ವಚಿದನ್ಯಥಾ ॥**

ಎಂದು ಆಚಾರ್ಯರು ಅಶುದ್ಧಿಗೆ ಕಾರಣವನ್ನೂ ನಿರೂಪಿಸಿದ್ದಾರೆ. ಆಯಾ ವಾದಿಗಳು ತಮಗೆ ಅನುಕೂಲವಾದ ಶ್ಲೋಕಗಳನ್ನು ರಚಿಸಿ ಅದನ್ನು ಸೇರಿಸಿದ್ದಾರೆ. ಪ್ರತಿಕೂಲವಾದ ಶ್ಲೋಕಗಳನ್ನು ಗ್ರಂಥದಿಂದ ತೆಗೆದುಹಾಕುತ್ತಾರೆ. ಇನ್ನು ಕೆಲವು ಕಡೆ ಹೆಸರುಗಳನ್ನು

ಬದಲಾಯಿಸಿ ತಮಗೆ ಬೇಕಾದ ಪಾತ್ರಕ್ಕೆ ಶ್ರೇಷ್ಠತೆಯನ್ನು ಸಂಪಾದಿಸಲು ಯತ್ನಿಸಿದ್ದಾರೆ. ಇನ್ನು ಕೆಲವು ಕಡೆ ಲೇಖಕ ಪ್ರಮಾದಗಳಿಂದ ತಪ್ಪುಗಳನ್ನು ಉಂಟಾಗಿವೆ ಎಂದು ತಿಳಿಸಿದ್ದಾರೆ.

**ಗ್ರಂಥೋಪ್ಯೇವಂ ವಿಲುಳಿತಃ ಕಿಮ್ವರ್ಥೋ ದೇವದುರ್ಗಮಃ ॥**

ಮೂಲ ಗ್ರಂಥವೇ ಇಂತಹ ವಿನಾಶಕ್ಕೆ ಒಳಗಾಗಿದೆ ಇನ್ನು ದೇವ ದುರ್ಗಮವಾದ ಅರ್ಥದ ವಿಷಯದಲ್ಲಿ ಹೇಳುವುದೇನಿದೆ ಎಂದು ಉದ್ಗರಿಸಿದ್ದಾರೆ. 'ಬ್ರಹ್ಮಾಪಿ ತನ್ನ ಜಾನಾತಿ ಈಷತ್ ಸರ್ವೋಪಿ ಜಾನತಿ' ಎಂಬ ನಾರದೀಯ ಪುರಾಣವಚನದಂತೆ ಅಲ್ಪಸ್ವಲ್ಪ ಅರ್ಥವು ಎಲ್ಲರಿಗೂ ತಿಳಿದರೂ ಪೂರ್ಣವಾದ ಅರ್ಥವು ಬ್ರಹ್ಮದೇವರಿಗೂ ಗೋಚರವಾಗುವುದಿಲ್ಲ ಎಂದು ತಿಳಿಯುವುದರಿಂದ ಭಾರತತಾತ್ಪರ್ಯನಿರ್ಣಯವನ್ನು ಮಾಡಲು ಹೊರಟ ಆಚಾರ್ಯರ ಪ್ರಯತ್ನವು ಅತ್ಯಂತ ಸಮಂಜಸವೆಂದು ಹೇಳಬೇಕು.

ಇದಕ್ಕೆ ಸೂಕ್ತವಾದ ಉದಾಹರಣೆಯೆಂದರೆ ಮಹಾಭಾರತದ ಮೊದಲನೆಯ ಶ್ಲೋಕ. ಅದು ಹೀಗಿದೆ-

**ನಾರಾಯಣಂ ಸುರಗುರುಂ ಜಗದೇಕನಾಥಂ**
**ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।**
**ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ**
**ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ॥**

ಆಚಾರ್ಯರ ಕಾಲಕ್ಕೇ ಈ ಶ್ಲೋಕವು ಆದಿಯಲ್ಲಿ ಇರಲಿಲ್ಲ. ಲಕ್ಷಾಲಂಕಾರದಲ್ಲಿ 'ಉಗ್ರಶ್ರವಾಃ' ಎನ್ನುವುದೇ ಮಂಗಳಾಚರಣೆ ಎಂದು ಒಂದು ಪ್ರಕ್ಷಿಪ್ತವಾಕ್ಯ ಸೇರಿದೆ. ವಾದಿರಾಜರ ತಾತ್ಪರ್ಯ ನಿರ್ಣಯದ ಭಾವಪ್ರಕಾಶಿಕಾ ವ್ಯಾಖ್ಯಾನಕ್ಕೆ ಇದು ವಿರುದ್ಧವಾದ್ದರಿಂದ ಪ್ರಕ್ಷಿಪ್ತವೆಂದೇ ನಿರ್ಣಯಿಸಬಹುದು. ಆದ್ದರಿಂದ ಆಚಾರ್ಯರು ಕೇವಲ ದೇವತೆಯಾಗಿ ನಿರ್ಣಯವನ್ನು ಹೇಳದೆ ಒಬ್ಬ ಪ್ರಾಮಾಣಿಕ ಸಂಶೋಧಕನಂತೆಯೂ ದೇಶದೇಶಗಳಲ್ಲಿ ತಿರುಗಿ ಗ್ರಂಥಗಳನ್ನು ಸಂಗ್ರಹಿಸಿ, ಸಂಶೋಧಿಸಿ ಅದರ ಆಧಾರದಿಂದಲೂ ಹರಿಯ ಅನುಗ್ರಹದಿಂದಲೂ ನಿರ್ಣಯಗಳನ್ನು ಹೇಳಿದ್ದಾರೆ.

**ಕಲಾವೇವಂ ವ್ಯಾಕುಲಿತೇ ನಿರ್ಣಯಾಯ ಪ್ರಚೋದಿತಃ ।**
**ಹರಿಣಾ ನಿರ್ಣಯಾನ್ ವಚ್ಮಿ ವಿಜಾನನ್ ತತ್ಪ್ರಸಾದತಃ ।**
**ಶಾಸ್ತ್ರಾಂತರಾಣಿ ಸಂಜಾನನ್ ವೇದಾಂಶ್ಚಾಸ್ಯ ಪ್ರಸಾದತಃ ।**
**ದೇಶೇ ದೇಶೇ ತಥಾ ಗ್ರಂಥಾನ್ ದೃಷ್ಟ್ವಾ ಚೈವ ಪೃಥಗ್ವಿಧಾನ್ ।**
**ಯಥಾ ಸ ಭಗವಾನ್ ವ್ಯಾಸಃ ಸಾಕ್ಷಾನ್ನಾರಾಯಣಃ ಪ್ರಭುಃ ।**
**ಜಗಾದ ಭಾರತಾದ್ಯೇಷು ತಥಾ ವಕ್ಷ್ಯೇ ತದಾಜ್ಞಯಾ ॥**

'ಹೀಗೆ ಕಲಿಯುಗದಲ್ಲಿ ಗ್ರಂಥಗಳೆಲ್ಲವೂ ಅಶುದ್ಧವಾಗಿರುವಾಗ ಹರಿಯಿಂದ ನಿರ್ಣಯವನ್ನು ಮಾಡಲು ಆದೇಶವನ್ನು ಹೊಂದಿ, ಅವನ ಅನುಗ್ರಹದಿಂದಲೇ ವೇದಗಳನ್ನು ಶಾಸ್ತ್ರಾಂತರಗಳನ್ನು ಚೆನ್ನಾಗಿ ತಿಳಿದು, ದೇಶದೇಶಗಳಲ್ಲಿ ಸಂಚರಿಸಿ ಅನೇಕ ವಿಧವಾದ ಗ್ರಂಥಗಳನ್ನು ನೋಡಿ, ಸಾಕ್ಷಾನ್ನಾರಾಯಣನೂ ಪ್ರಭುವೂ ಆದ ವ್ಯಾಸರು ಹೇಳಿದಂತೆ (ಅವರಿಗೆ ಸಮ್ಮತವಾಗುವಂತೆ) ಭಾರತಾದ್ಯರ್ಥವನ್ನು ಹೇಳುತ್ತೇನೆ' ಎಂದು ಪ್ರತಿಜ್ಞೆ ಮಾಡಿದ್ದಾರೆ.

ಮೊದಲನೆಯ ಶ್ಲೋಕದ ಅನಂತರ ಬರುವ 'ಕೃಷ್ಣೋ ಯಜ್ಞೈರಿಜ್ಯತೇ...' ಎಂಬ ಶ್ಲೋಕವೂ ಅದರ ಅನಂತರ 'ಸೃಷ್ಟಾ ಬ್ರಹ್ಮಾದಯೋ ದೇವಾಃ....' ಎಂಬ ಶ್ಲೋಕವೂ ಹೀಗೆಯೇ ಅದರ್ಶನವನ್ನು ಪಡೆದಿದೆ. ಅದರ ಅನಂತರ ಬರುವ 'ನಾರಾಯಣಂ ನಮಸ್ಕೃತ್ಯ....' ಎಂಬ ಶ್ಲೋಕವು ಆ ಸ್ಥಳದಲ್ಲಿಲ್ಲದೆ ಬೇರೆ ಮಧ್ಯಸ್ಥಳದಲ್ಲಿ ಈಗ ಪಠಿಸಲ್ಪಡುತ್ತದೆ.

## ಲಕ್ಷಾಲಂಕಾರ ಮತ್ತು ವಾದಿರಾಜರು

ಇಂತಹ ಸಂದರ್ಭದಲ್ಲಿ ಶ್ರೀವಾದಿರಾಜರು ರಚಿಸಿರುವ ಲಕ್ಷಾಲಂಕಾರ ಗ್ರಂಥವು ಬಹಳ ಉಪಕಾರವನ್ನು ಮಾಡುತ್ತದೆ. ಲಕ್ಷಾಲಂಕಾರ ಗ್ರಂಥದ ಬಗ್ಗೆ ಪರಂಪರೆಯಿಂದ ಬಂದ ಒಂದು ಕಥೆ ಇದೆ. ವಾದಿರಾಜರ ತಾಯಿ ಗೌರಮ್ಮನವರು ವಾದಿರಾಜರ ಜನನಕ್ಕಿಂತ ಮುಂಚೆಯೇ ಒಂದು ಗಂಡುಮಗು ಜನಿಸಿದರೆ ಕೃಷ್ಣದೇವರಿಗೆ ಸಹಸ್ರ ಸುವರ್ಣಾಭರಣಗಳನ್ನು ಅರ್ಪಿಸುವುದಾಗಿ ಹರಕೆಹೊತ್ತುಕೊಂಡಿದ್ದರಂತೆ. ಅನಂತರ ವಾದಿರಾಜರು (ಅವರ ಪೂರ್ವಾಶ್ರಮನಾಮ ಭೂವರಾಹ) ಜನಿಸಿದರು. ಅವರು ಬಾಲ್ಯದಲ್ಲಿಯೇ ಸಂನ್ಯಾಸಿಗಳಾದರು. ಅವರು ಸುಮಾರು ಮಧ್ಯವಯಸ್ಸಿಗೆ ಬಂದಾಗ ಅವರ ತಾಯಿ ಕೃಷ್ಣದೇವರಿಗೆ ಮಾಡಿಕೊಂಡಿದ್ದ ಈ ಒಂದು ಹರಕೆ ಉಳಿದು ಹೋಗಿದೆ ಎಂದು ಹೇಳಿದರಂತೆ. ಆಗ ವಾದಿರಾಜರು ಸುವರ್ಣ ಎಂದರೆ ಒಳ್ಳೆಯ ಅಕ್ಷರಗಳು. ಅಂತಹ ಒಂದು ಲಕ್ಷ ಅಥವಾ ಅದಕ್ಕಿಂತಲೂ ಮಿಗಿಲಾದ ಸಂಖ್ಯೆಯಿಂದ ಕೂಡಿದ ಅಕ್ಷರಗಳಿಂದ ಮಹಾಭಾರತಕ್ಕೆ ಒಂದು ವ್ಯಾಖ್ಯಾನವನ್ನು ರಚಿಸಿ ಅದನ್ನು ಕೃಷ್ಣದೇವರಿಗೆ ಸಮರ್ಪಿಸಿದರೆ ಹರಕೆಯು ತೀರುತ್ತದೆ ಎಂದು ಆಲೋಚಿಸಿ ಲಕ್ಷಾಲಂಕಾರ ಗ್ರಂಥವನ್ನು ರಚಿಸಿ ಕೃಷ್ಣದೇವರಿಗೆ ಸಮರ್ಪಿಸಿದರೆಂದು ಕೇಳಿಬರುತ್ತದೆ.

ಶ್ರೀವಾದಿರಾಜರ ಕ್ರಿ.ಶ. ೧೪೮೦-೧೬೦೦ ಅವರಿಗಿಂತ ಅವರ ತಾಯಿ ೩೦ ವರ್ಷ ದೊಡ್ಡವರೆಂದು ಇಟ್ಟುಕೊಂಡರೂ ಅವರಿಗೆ ೫೦ ವರ್ಷ ವಯಸ್ಸಾಗುವಾಗ ಎಂದರೆ

ಸುಮಾರು ಕ್ರಿ.ಶ. ೧೫೩೦ ರ ವೇಳೆಗೆ ಲಕ್ಷಾಲಂಕಾರ ಗ್ರಂಥದ ರಚನೆಯಾಗಿದೆ ಎಂದು ಊಹಿಸಬಹುದು.

ಶ್ರೀಮಧ್ವಾಚಾರ್ಯರು ಮಹಾಭಾರತಕ್ಕೆ ಕೊಟ್ಟ ಮಹತ್ತ್ವವನ್ನು ಬೇರೆ ಯಾವ ಆಚಾರ್ಯರೂ ಕೊಡಲಿಲ್ಲ. ಆಚಾರ್ಯರು ಮಹಾಭಾರತವನ್ನು ವಿವರಿಸಲು ಮಹಾಭಾರತ ತಾತ್ಪರ್ಯನಿರ್ಣಯ ಮತ್ತು ಯಮಕ ಭಾರತ ಗ್ರಂಥಗಳನ್ನು ರಚಿಸಿದುದಷ್ಟೇ ಅಲ್ಲ. ಆಚಾರ್ಯರ ಕಾಲದಿಂದಲೂ ಮಹಾಭಾರತ ಪ್ರವಚನವು ಆ ಕಾರಣದಿಂದ ವಿಶೇಷವಾಗಿ ನಡೆದುಕೊಂಡು ಬಂದಿತು. ಅದರಲ್ಲಿಯೂ ವಾದಿರಾಜರು ಲಕ್ಷಾಲಂಕಾರವನ್ನು ರಚಿಸಿದ ಮೇಲೆ ಮಹಾಭಾರತದ ಪ್ರಚಾರವು ಜನತೆಯಲ್ಲಿ ವಿಶೇಷ ರೀತಿಯಿಂದ ನಡೆಯಿತು. ಮಹಾಭಾರತವನ್ನು ಬರೆಯುವುದು ಒಂದು ದೊಡ್ಡ ಲೇಖನ ಯಜ್ಞವೆಂದು ಭಾವಿಸಿ ಅನೇಕರು ತಾಳೆಗರಿಗಳಲ್ಲಿ (ಆಗಿನ್ನೂ ಮುದ್ರಣವಿರಲಿಲ್ಲ) ಬರೆದರು. ಅಂತಹ ತಾಳೆಗರಿಗಳು ಉಡುಪಿಯ ಅಷ್ಟಮಠಗಳಲ್ಲಿ ಈಗಲೂ ಲಭ್ಯವಾಗಿವೆ.

ಪುಣೆಯ ಭಂಡಾರಕರ ಸಂಶೋಧನಾ ಸಂಸ್ಥೆಯವರು ಮಾಡಿದ ಒಂದು ನ್ಯೂನತೆ ಎಂದರೆ ಅವರು ಭಾರತ ದೇಶದಲ್ಲಿ ಬೇರೆ ಎಲ್ಲಾ ಕಡೆಗಳಲ್ಲಿಯೂ ತಿರುಗಿ ಶಾರದಾ ಲಿಪಿ, ನಾಗರೀಲಿಪಿ, ದೇವನಾಗರೀ ಲಿಪಿಗಳಲ್ಲಿದ್ದ ಮಹಾಭಾರತ ಪ್ರತಿಗಳನ್ನು ಸಂಗ್ರಹಿಸಿದರೂ ಉಡುಪಿಗೆ ಬಂದು ಅಲ್ಲಿಂದ ಯಾವ ಪ್ರತಿಯನ್ನೂ ಸಂಗ್ರಹಿಸಲಿಲ್ಲ. ಉಡುಪಿಯು ದೊಡ್ಡ ತತ್ತ್ವಜ್ಞಾನ ಕೇಂದ್ರ ಮತ್ತು ಅಧ್ಯಯನ ಕೇಂದ್ರವಾಗಿದ್ದುದರಿಂದ ಅವರು ಅವಶ್ಯವಾಗಿ ಉಡುಪಿಗೆ ಬಂದು ಸಂಗ್ರಹ ಮಾಡಬೇಕಾಗಿದ್ದಿತು. ಆದರೆ ಅವರು ಹಾಗೆ ಮಾಡದಿದ್ದುದರಿಂದ ಅವರ ಸಂಶೋಧನ ಆವೃತ್ತಿಯಲ್ಲಿ ಉಳಿದೆಲ್ಲಾ ಪಾಠಾಂತರಗಳನ್ನೂ ಸಂಗ್ರಹ ಮಾಡಿದ್ದರೂ ಉಡುಪಿಯ ತಾಳೆಗರಿಗಳಲ್ಲಿದ್ದ ಪಾಠಾಂತರಗಳನ್ನು ಸಂಗ್ರಹ ಮಾಡಲಿಲ್ಲವಾಗಿ ಲಕ್ಷಾಲಂಕಾರಕ್ಕೆ ಅನುಗುಣವಾಗಿ ಮಹಾಭಾರತವನ್ನು ಅಧ್ಯಯನ ಮಾಡುವವರಿಗೆ ಈ ನ್ಯೂನತೆಯು ಎದ್ದು ಕಾಣುತ್ತದೆ.

ಲಕ್ಷಾಲಂಕಾರ ವ್ಯಾಖ್ಯಾನವಾದರೂ ಮಹಾಭಾರತದ ಪ್ರತಿಯೊಂದು ಶ್ಲೋಕಕ್ಕೂ ಇಲ್ಲ. ಎಲ್ಲಿ ಶಬ್ದವು ಅಥವಾ ಅರ್ಥವು ಕ್ಲಿಷ್ಟವಾಗುತ್ತದೆಯೋ ಅಥವಾ ವಿಶೇಷ ಪ್ರಮೇಯಗಳನ್ನು ಹೇಳಬೇಕಾಗುತ್ತದೆಯೋ ಅಂತಹ ಸ್ಥಳದಲ್ಲಿ ಮಾತ್ರ ವ್ಯಾಖ್ಯಾನವನ್ನು ಬರೆದುಕೊಂಡು ಹೋಗುತ್ತಾರೆ. ಆ ಕಾರಣದಿಂದಲೇ ಅವರು 'ನಾರಾಯಣಂ...' ಎಂದು ಪ್ರಾರಂಭವಾಗುವ ಮೊದಲಿನ ನಾಲ್ಕು ಶ್ಲೋಕಗಳಿಗೆ ವ್ಯಾಖ್ಯಾನವನ್ನು ಬರೆದಿಲ್ಲ. ಆಚಾರ್ಯರೇ ಆ ಶ್ಲೋಕಗಳಿಗೆ ವ್ಯಾಖ್ಯಾನವನ್ನು ಮಾಡಿರುವುದರಿಂದ ತಾವು ಇಲ್ಲಿ ಹೇಳಬೇಕಾದ ವಿಷಯವಿಲ್ಲವೆಂದೂ ಏನಾದರೂ ಹೇಳಬೇಕಾದುದಿದ್ದರೆ ಅದನ್ನು

ಆಚಾರ್ಯರ ವ್ಯಾಖ್ಯಾನವನ್ನು ವಿವರಿಸುವ ಸಂದರ್ಭದಲ್ಲಿಯೇ ಹೇಳಬಹುದೆಂದೂ ಆಲೋಚಿಸಿ ಇಲ್ಲಿ ಬರೆದಿದ್ದಾರೆ. ಆದ್ದರಿಂದ ವಾದಿರಾಜರ ಅಭಿಪ್ರಾಯದಲ್ಲಿ ಭಾರತದ ಆದಿಯಲ್ಲಿ 'ನಾರಾಯಣಂ...' ಎಂಬ ಶ್ಲೋಕವಿಲ್ಲ ಎಂದು ಹೇಳುವುದಕ್ಕೆ ಯಾವ ಆಧಾರವೂ ಇಲ್ಲ. ಆದರ ಅನಂತರ ಬರುವ ಮೊದಲನೆಯ ಗದ್ಯದಲ್ಲಿ ಹೇಳಬೇಕಾದ ಅಧ್ಯಾಹಾರಾದಿ ವಿಷಯಗಳಿರುವುದರಿಂದ ಅಲ್ಲಿಂದ ತಮ್ಮ ವ್ಯಾಖ್ಯಾನವನ್ನು ಪ್ರಾರಂಭಿಸಿದ್ದಾರೆ.

ಲಕ್ಷಾಲಂಕಾರದಲ್ಲಿ ಪರ್ವ ಮತ್ತು ಅಧ್ಯಾಯ ಸಂಖ್ಯೆಯನ್ನು ಹೇಳಿ ಅನಂತರ ಪ್ರತೀಕ ಗ್ರಹಣವನ್ನು ಮಾಡಿ ಅರ್ಥವನ್ನು ಹೇಳಿದ್ದಾರೆ. ನಾವು ಮುದ್ರಿತಪುಸ್ತಕಗಳನ್ನು ಅನುಸರಿಸಿ ಹೋದರೆ ಆದಿಪರ್ವದ ಮೊದಲನೆಯ ಕೆಲವು ಅಧ್ಯಾಯಗಳು ಕಳೆದ ಮೇಲೆ ಲಕ್ಷಾಲಂಕಾರದಲ್ಲಿ ಹೇಳಿದ ಅಧ್ಯಾಯಗಳಲ್ಲಿ ಅಲ್ಲಿ ಹಿಡಿಯುವ ಪ್ರತೀಕಗಳು ದೊರೆಯುವುದಿಲ್ಲ. ಅವು ಬೇರೆ ಅಧ್ಯಾಯದಲ್ಲಿ ದೊರೆಯುತ್ತವೆ. ಇದರಿಂದ ವಾದಿರಾಜರ ಕಾಲದಲ್ಲಿದ್ದ ಭಾರತಪಾಠಕ್ಕೂ ಮತ್ತು ಇದುವರೆಗೆ ಮುದ್ರಿತವಾದ ಭಾರತಪಾಠಕ್ಕೂ ಎಷ್ಟು ಅಂತರವಿದೆಯೆಂದು ತಿಳಿಯುತ್ತದೆ. ಆದರೆ ಉಡುಪಿಯ ಅಷ್ಟಮಠಗಳಲ್ಲಿರುವ ತಾಳೆಗರಿಗಳಲ್ಲಿ ಅಧ್ಯಾಯದ ಸಂಖ್ಯೆಗಳು ಪ್ರಾಯಃ ಒಂದೇ ರೀತಿ ಇವೆ. ಎಲ್ಲದರಲ್ಲಿಯೂ ಪ್ರಾರಂಭದಲ್ಲಿ ಹೆಚ್ಚಾಗಿ 'ಶ್ರೀವಾದಿರಾಜ ಗುರುಭ್ಯೋ ನಮಃ' ಎಂಬ ಬರವಣಿಗೆ ಇರುವುದರಿಂದ ಅವೆಲ್ಲವೂ ವಾದಿರಾಜರ ಅನಂತರ ಆದರೆ ಸಮೀಪದ ಕಾಲಕ್ಕೆ ಸೇರಿದುದು ಎಂದು ತಿಳಿದುಬರುತ್ತದೆ. ತಾಳೆಗರಿಗಳ ಸ್ಥಿತಿ ಮತ್ತು ಆದರಲ್ಲಿರುವ ಲಿಪಿಗಳ ಶೈಲಿಯನ್ನು ಗಮನಿಸಿ ಇದನ್ನು ನಿರ್ಣಯಿಸಬಹುದು.

## ಪ್ರಾಚೀನ ಹಸ್ತಪ್ರತಿಗಳು

ತುಳುಲಿಪಿ ಎಂದು ಕರೆಯುವ ಆ ಲಿಪಿಯು ಪ್ರಾಚೀನ ಮಲಯಾಳಂ ಲಿಪಿಯೇ ಆಗಿರುವುದರಿಂದ, ಈಚೆಗೆ ಮಲಯಾಳ ಲಿಪಿಯಲ್ಲಿ ಸ್ವಲ್ಪ ಸುಧಾರಣೆಯನ್ನು ತಂದುಕೊಂಡಿದ್ದರೂ ಸುಮಾರು ೪೦೦ ವರ್ಷಗಳ ಹಿಂದೆ ಇದ್ದ ಆ ಲಿಪಿಯೇ ತಾಳೆಗರಿಗಳಲ್ಲಿ ಕಂಡುಬರುವುದರಿಂದ ಇವೆಲ್ಲವೂ ಸುಮಾರು ೪೦೦ ವರ್ಷ ಹಿಂದನವು. ಆದ್ದರಿಂದ ನಮ್ಮ ಮಹಾಭಾರತ ಪಾಠವು ೪೦೦ ವರ್ಷ ಹಿಂದಿನದು ಎಂದು ಊಹಿಸಬಹುದಾಗಿದೆ. ಈ ತಾಳೆಗರಿಗಳಲ್ಲಿ ಮೂರು ಮಾತೃಕೆಗಳಲ್ಲಿ ಮಹಾಭಾರತದ ಆದಿಯಲ್ಲಿಯೇ 'ನಾರಾಯಣಂ ಸುರಗುರಂ...' ಎಂಬ ಶ್ಲೋಕವು ಆದರ ಅನಂತರದ ಮೂರು ಶ್ಲೋಕಗಳೂ ಕಂಡುಬರುತ್ತವೆ. ಆದ್ದರಿಂದ ವಾದಿರಾಜರ ಕಾಲದಲ್ಲಿ ಅವರು ಸಂಶೋಧಿಸಿದ ಪಾಠದ ಪ್ರತಿಗಳು ಇವುಗಳಾಗಿವೆ ಎಂದು ಊಹಿಸಬಹುದಾಗಿದೆ. ಆ

ಕಾರಣದಿಂದಲೇ ಈ ನಮ್ಮ ಪುಸ್ತಕದಲ್ಲಿ ಅದರಂತೆ 'ನಾರಾಯಣಂ ಸುರಗುರುಂ' ಎಂಬ ಶ್ಲೋಕದಿಂದಲೇ ಗ್ರಂಥವನ್ನು ಪ್ರಾರಂಭಿಸಿದ್ದೇವೆ.

ಮಹಾಭಾರತಕ್ಕೆ ನೀಲಕಂಠದೀಕ್ಷಿತರು ಬರೆದು ಒಂದು ವ್ಯಾಖ್ಯಾನವಿದೆ. ಅದು ಬಹಳ ಸಂಕ್ಷಿಪ್ತವಾದುದು. ನೀಲಕಂಠ ದೀಕ್ಷಿತರು ಅಪ್ಪಯ್ಯ ದೀಕ್ಷಿತರ ಪೌತ್ರರು. ಅಪ್ಪಯ್ಯ ದೀಕ್ಷಿತರೂ ವಿಜಯೀಂದ್ರರೂ ಮತ್ತು ವಾದಿರಾಜರೂ ಸಮಕಾಲೀನರು. ಆದ್ದರಿಂದ ಉಪಲಬ್ಧ ವ್ಯಾಖ್ಯಾನಗಳಲ್ಲಿ ವಾದಿರಾಜರದೇ ಪ್ರಾಚೀನ ವ್ಯಾಖ್ಯಾನ ಎಂಬ ಕಾರಣದಿಂದಲೂ ಲಕ್ಷಾಲಂಕಾರ ಪಾಠಗಳನ್ನೇ ಆದರಿಸಲಾಗಿದೆ.

ಮುದ್ರಣವಾಗಿರುವ ಅನೇಕ ಪಾಠಗಳಲ್ಲಿ ವಾವಿಳ್ಳ ರಾಮಸ್ವಾಮಿಯವರು ಪ್ರಕಾಶಿಸಿರುವ ಪಾಠವೇ ತಾಳೆಗರಿಗಳಲ್ಲಿರುವ ಪಾಠಕ್ಕೆ ಬಹಳವಾಗಿ ಸರಿ ಹೊಂದುವ ಪಾಠ. ಆದ್ದರಿಂದ ಕುಂಭಕೋಣದ ಪ್ರತಿಯ ಅನೇಕ ಪಾಠಗಳನ್ನು ಕೈಬಿಟ್ಟು ತಾಳೆಗರಿ ಮತ್ತು ವಾವಿಳ್ಳಿಯವರ ಪಾಠಗಳನ್ನೇ ನಮ್ಮ ಈ ಗ್ರಂಥದ ಸಂಪಾದನೆಯಲ್ಲಿ ಉಪಯೋಗಿಸಲಾಗಿದೆ.

ನಾವು ಈ ಪ್ರಯತ್ನದಿಂದ ಆಚಾರ್ಯರಿಗೆ ಸಮ್ಮತವಾದ ಮಹಾಭಾರತ ಪಾಠವನ್ನು ಸಂಪಾದನೆ ಮಾಡಲು ಸಾಧ್ಯವಿಲ್ಲ. ವಾದಿರಾಜರ ಕಾಲದಲ್ಲಿದ್ದ ಅವರಿಗೆ ಸಮ್ಮತವಾದ ಪಾಠವನ್ನೂ ಸಂಪಾದನೆ ಮಾಡಲು ಸಾಧ್ಯವಾಗುವುದಿಲ್ಲ. ಏಕೆಂದರೆ ಲಕ್ಷಾಲಂಕಾರದಲ್ಲಿ ಎಲ್ಲಾ ಶ್ಲೋಕಗಳ ಎಲ್ಲಾ ಪ್ರತೀಕಗಳನ್ನೂ ಹಿಡಿದು ವ್ಯಾಖ್ಯಾನ ಮಾಡಿಲ್ಲ. ಆದರೆ ವಾದಿರಾಜರಿಗೆ ಅಭಿಮತವಾದ ಪಾಠಕ್ಕೆ ಸಮೀಪದಲ್ಲಿರುವ ಪಾಠವನ್ನು ಮಾತ್ರ ಸಂಪಾದನೆ ಮಾಡಲು ಸಾಧ್ಯ . ಅದೇ ಉದ್ದೇಶದಿಂದ ಈ ಪ್ರಯತ್ನದಲ್ಲಿ ತೊಡಗಿದ್ದೇವೆ.

## ಅಷ್ಟಮಠಗಳ ಕೊಡುಗೆ

ನಮಗೆ ಪಲಿಮಾರು ಮಠ, ಪೇಜಾವರ ಮಠ, ಸೋದೆ ಮಠ, ಕೃಷ್ಣಾಪುರ ಮಠ, ಕಾಣಿಯೂರು ಮಠ, ಅದಮಾರು ಮಠ, ಪುತ್ತಿಗೆ ಮಠ ಮತ್ತು ಸುಬ್ರಹ್ಮಣ್ಯ ಮಠದ ಪೂಜ್ಯ ಅಧೀಶ್ವರರು ತಮ್ಮ ತಮ್ಮ ವಶದಲ್ಲಿದ್ದ ತಾಳೆಗರಿಗಳನ್ನು ಕೊಟ್ಟು ಅನುಗ್ರಹಿಸಿದ್ದಾರೆ. ಈ ಪ್ರಯತ್ನದಿಂದ ಏನಾದರೂ ಶ್ರೇಯಸ್ಸು ಉಂಟಾಗುವುದಾದರೆ ಅದು ಈ ಮಹನೀಯರುಗಳಿಗೆ ಸಲ್ಲಬೇಕಾದದ್ದು. ಅವರ ಚರಣಾರವಿಂದಗಳಲ್ಲಿ ಯಾವಾಗಲೂ ನಮ್ಮ ಸಾಷ್ಟಾಂಗ ಪ್ರಣಾಮಗಳಿವೆ.

ಲಕ್ಷಾಲಂಕಾರ ಗ್ರಂಥವು ಹಿಂದೆ ಶ್ರೀ ಸೋದೆ ಮಠದಿಂದಲೇ ಮುದ್ರಿತವಾಗಿದೆ. ಆದರೆ ಆ ಮುದ್ರಿತ ಪುಸ್ತಕದಲ್ಲಿಯೂ ಸಹ ಕೆಲವು ಮುದ್ರಣ ದೋಷಗಳಿವೆ. ಮತ್ತು ಅವರು ಮುದ್ರಣಕ್ಕೆ ಉಪಯೋಗಿಸಿದ ಮೂಲ ಮಾತೃಕೆಗಳಲ್ಲಿ ಲೇಖಕ ಪ್ರಮಾದದಿಂದ

ಬಂದಿರುವ ದೋಷಗಳೂ ಹಾಗೆಯೇ ಮುದ್ರಿತ ಪುಸ್ತಕದಲ್ಲಿ ಮೂಡಿಬಂದಿವೆ. ನಮ್ಮ ಬಳಿಯಲ್ಲಿ ಮಠದವರು ಕೊಟ್ಟಿರುವ ಲಕ್ಷಾಲಂಕಾರದ ತಾಳೆಗರಿಯ ಪಾಠಗಳಿಂದ ಇಂತಹ ದೋಷಗಳನ್ನು ಸಾಧ್ಯವಿದ್ದಷ್ಟು ತಿದ್ದಿ ಸರಿಮಾಡಲು ಪ್ರಯತ್ನ ಪಡಲಾಗಿದೆ.

ಇತಿಹಾಸ ಪುರಾಣಗಳ ವ್ಯಾಖ್ಯಾನಗಳನ್ನು ಗಮನಿಸಿದಾಗ ನಮಗೆ ಈ ಒಂದು ಅಂಶವು ತಿಳಿಯುತ್ತದೆ. ಅವುಗಳಲ್ಲಿ ಅನೇಕ ಪ್ರಯೋಗಗಳು ಪಾಣಿನಿಯ ವ್ಯಾಕರಣಕ್ಕೆ ಅನುಗುಣವಾಗಿಲ್ಲದಿರುವುದು ಮತ್ತು ಅಲ್ಲಿ ಪ್ರಯೋಗಿಸಿರುವ ಅನೇಕ ಶಬ್ದಗಳಿಗೆ ಕೋಶ, ನಿಘಂಟುಗಳಲ್ಲಿ ಅರ್ಥವು ದೊರೆಯದಿರುವುದು ಇನ್ನೊಂದು ಅಂಶ. ಕೆಲವು ಸಲ ಆ ಶಬ್ದಗಳೇ ಯಾವ ಕೋಶಗಳಲ್ಲಿಯೂ ಸಿಗುವುದಿಲ್ಲ. ಇನ್ನು ಕೆಲವು ಕಡೆ ಮೂಲದಲ್ಲಿರುವ ಪದ್ಯ, ಗದ್ಯಗಳಿಗೆ ಪರಸ್ಪರವಾಗಿ ಅನ್ವಯವೇ ತಿಳಿಯದಿರುವುದು ಮತ್ತು ತೋರುವ ಅನ್ವಯವು ಶಾಸ್ತ್ರಕ್ಕೆ ವಿರುದ್ಧವಾಗಿರುವುದು. ಇಂತಹ ಅನೇಕ ಉದಾಹರಣೆಗಳು ಕಂಡುಬರುತ್ತವೆ. ಅಂತಹ ಸಂದರ್ಭದಲ್ಲಿ ವ್ಯಾಖ್ಯಾನ ಮಾಡುವವರು ಆ ಶಬ್ದವನ್ನೇ ಬದಲಾಯಿಸಿ ಅದನ್ನು ಸಾಧುವನ್ನಾಗಿ ಮಾಡಿ, ಅದರ ಅರ್ಥವು ಕೋಶದಲ್ಲಿ ದೊರೆಯುವಂತೆ ಮಾಡಿ ವ್ಯಾಖ್ಯಾನ ಮಾಡಿ ಏನೋ ಒಂದು ಅರ್ಥವನ್ನು ಹೇಳುತ್ತಾರೆ. ಆದರೆ ಮಧ್ವರ ಪರಂಪರೆಯಲ್ಲಿ ಎಂದೂ ಇಂತಹ ಅಕಾರ್ಯವನ್ನು ಮಾಡುವುದಿಲ್ಲ. ವೇದ ಪುರಾಣಗಳಲ್ಲಿ ಸಿಗುವ ಶಬ್ದಗಳು ಈಚೆಗೆ ರಚಿತವಾದ ವ್ಯಾಕರಣಗಳಿಗಾಗಲೀ, ಕೋಶಗಳಿಗಾಗಲೀ ಅನುಗುಣವಾಗಿರಬೇಕೆಂಬ ಯಾವ ನಿರ್ಬಂಧವೂ ಇಲ್ಲ. ಆ ಶಬ್ದಗಳನ್ನು ಗಮನಿಸದೆ ಕೋಶ ವ್ಯಾಕರಣಗಳನ್ನು ರಚಿಸುವುದು ಅವರ ತಪ್ಪು ಅಷ್ಟೆ. ಆದ್ದರಿಂದಲೇ ಪಾಣಿನಿಯೇ 'ಛಂದಸಿ ಸರ್ವೇ ವಿಧಯಃ ವಿಕಲ್ಪ್ಯಂತೇ' ಎಂದು ಹೇಳಿ ಈ ವ್ಯಾಕರಣದಲ್ಲಿ ಹೇಳಿರುವ ನಿಯಮಗಳು ಅನುಸರಿಸಲ್ಪಟ್ಟಿರಬೇಕು ಎಂಬ ನಿಯಮವಿಲ್ಲ ಎಂದು ಹೇಳಿದ್ದಾನೆ. ಮಧ್ವರ ಮತ್ತು ಅವರ ಪರಂಪರೆಯ ವ್ಯಾಖ್ಯಾನದ ಮೂಲಸೂತ್ರ 'ಶಬ್ದಾ ಯೋಗವೃತ್ತಯಃ' ಎಂದರೆ ಶಬ್ದಗಳು ಮುಖ್ಯವಾಗಿ ಯೌಗಿಕವಾದ ಅರ್ಥವನ್ನು ಹೇಳುತ್ತವೆ ಎಂಬುದು. ಯೌಗಿಕಾರ್ಥಕ್ಕೂ ರೂಢವಾದ ಅರ್ಥಕ್ಕೂ ವಿರೋಧವಿಲ್ಲದಿರುವಾಗ ಯಾವ ಅನುಪಪತ್ತಿಯೂ ಇಲ್ಲ. ವಿರೋಧವಿರುವಾಗ ರೂಢಾರ್ಥವನ್ನು ಬಿಟ್ಟು ತೆಗೆದುಕೊಂಡರೆ ಪ್ರಮಾಣಾಂತರ ವಿರೋಧವು ಬರುವ ಸಂದರ್ಭದಲ್ಲಿ ರೂಢಾರ್ಥವನ್ನು ಯೌಗಿಕಾರ್ಥವನ್ನೇ ತೆಗೆದುಕೊಳ್ಳಬೇಕು. ಇದಕ್ಕೆ ಅನೇಕ ಉದಾಹರಣೆಗಳನ್ನು ಮಧ್ವಭಾಷ್ಯದಲ್ಲಿಯೂ ಮತ್ತು ಪ್ರಕೃತವಾದ ಲಕ್ಷಾಲಂಕಾರದಲ್ಲಿಯೂ ನೋಡಬಹುದು.

ಲಕ್ಷಾಲಂಕಾರದ ಮಹತ್ತ್ವವನ್ನು ತಿಳಿಯುವುದಕ್ಕಾಗಿ ಕೆಲವು ಉದಾಹರಣೆಗಳನ್ನು ಕೊಟ್ಟು ಚರ್ಚಿಸುತ್ತೇನೆ.

## ತಾಳೆಗರಿಗಳ ಪಾಠಗಳ ಸ್ವಾರಸ್ಯ

೧. **ಆಹುಃ ಕೇಚಿನ್ನ ತಸ್ಯೈತೇ ತಸ್ಯೈತೇ ಇತಿ ಚಾಪರೇ ।**
**ಯದಾ ಚಿರಮೃತಃ ಪಾಂಡುಃ ಕಥಂ ತಸ್ಯೇತಿ ಚಾಪರೇ ॥**

ಇದು ಎಲ್ಲಾ ಮುದ್ರಿತಪುಸ್ತಕಗಳಲ್ಲಿಯೂ ಇರುವ ಪಾಠ. ಪಾಂಡುವಿನ ಮರಣದ ನಂತರ ಪಾಂಡುವಿನ ಮಕ್ಕಳನ್ನು ಧೃತರಾಷ್ಟ್ರನ ಸಭೆಗೆ ಕರೆದುಕೊಂಡು ಬಂದಾಗ ಅಲ್ಲಿದ್ದ ಜನಗಳ ಪ್ರತಿಕ್ರಿಯೆಯನ್ನು ಹೇಳುವ ಸಂದರ್ಭವಿದು.

''ಕೆಲವರು ಇವರು ಅವನ ಮಕ್ಕಳಲ್ಲ ಎಂದರು. ಕೆಲವರು ಅವನ ಮಕ್ಕಳು ಎಂದರು. ಪಾಂಡುವು ಮರಣಹೊಂದಿ ಬಹಳ ಸಮಯವಾದುದರಿಂದ ಹೇಗೆ ಅವನ ಮಕ್ಕಳಾಗುತ್ತಾರೆ? ಎಂದು ಕೆಲವರು ಹೇಳಿದರು''. ಇದು ಈ ಶ್ಲೋಕದ ತಾತ್ಪರ್ಯ. ಆದರೆ ಇದು ಶುದ್ಧವಾದ ಪಾಠವಲ್ಲ . ಶುದ್ಧಪಾಠವು ಲಕ್ಷಾಲಂಕಾರದಲ್ಲಿ ಹೀಗೆ ದೊರೆಯುತ್ತದೆ.

**ಆಹುಃ ಕೇಚಿನ್ನ ಕಸ್ಯೈತೇ ಕಸ್ಯೈತೇ ಇತಿ ಚಾಪರೇ ।**
**ಯದಾ ಚಿರಂ ಮೃತಃ ಪಾಂಡುಃ ಕಥಂ ಕಸ್ಯೇತಿ ಚಾಪರೇ॥** ಎಂಬುದಾಗಿ.

ಉತ್ತರಾರ್ಧದಲ್ಲಿ ಅರ್ಥದಲ್ಲಿ ವ್ಯತ್ಯಾಸವಿಲ್ಲ. 'ಚಿರಂ ಮೃತಃ' 'ಚಿರಮೃತಃ' ಎಂದಿಷ್ಟೇ ವ್ಯತ್ಯಾಸ. ಪೂರ್ವಾರ್ಧದಲ್ಲಿ ಕಸ್ಯೈತೇ ಎಂದು ಇದೆ. ಇದನ್ನು ಅರ್ಥಮಾಡಲು ಬರಲಿಲ್ಲ, ಆದ್ದರಿಂದ ಅದನ್ನು ತಸ್ಯೈತೇ ಎಂದು ತಿದ್ದಿದರು. ಆದರೆ ಶುದ್ಧಪಾಠದಲ್ಲಿ ಅರ್ಥದ ಸೊಗಸನ್ನು ಗಮನಿಸಬೇಕು. ಪಾಂಡುವಿನ ಮಕ್ಕಳ ಸೌಂದರ್ಯ, ಓಜಸ್ಸುಗಳನ್ನು ನೋಡಿ ಇಂತಹ ಮಕ್ಕಳು ಯಾರಿಗೆ ಬೇಡ! ಎಂದು ಉದ್ಗರಿಸಿದರು ಎಂದು ಮೊದಲನೆಯ ಪದದ ತಾತ್ಪರ್ಯವು. ಈಗಲೂ ಒಳ್ಳೆಯ ವಸ್ತುವನ್ನು ನೋಡಿದರೆ 'ಇದು ಯಾರಿಗುಂಟು ಯಾರಿಗಿಲ್ಲ' 'ಇದು ಯಾರಿಗೆ ಬೇಕು, ಯಾರಿಗೆ ಬೇಡ' ಎಂದು ಉದ್ಗರಿಸುತ್ತೇವಷ್ಟೆ ! ಎಲ್ಲರಿಗೂ ಬೇಕು ಎಂಬುದೇ ತಾತ್ಪರ್ಯ. ಪಾಂಡವರ ಮಹಿಮೆಯನ್ನು ಈ ಪಾದವು ಹೇಳುತ್ತದೆ. ಇನ್ನು ಕೆಲವರು ಇವರು ಯಾರ ಮಕ್ಕಳು? ಎಂದು ಚಿಂತಿಸಿದರು ಎಂದು ಎರಡನೆಯ ಪದದ ತಾತ್ಪರ್ಯ. ಈ 'ಕಸ್ಯೈತೇ' ಎಂಬ ಪಾಠವು ಎಲ್ಲಾ ತಾಳೆಗರಿಗಳಲ್ಲಿಯೂ ದೊರೆಯುತ್ತದೆ ಎಂಬುದು ದೊಡ್ಡ ಸಂತೋಷದ ಸಂಗತಿ. ಅಲ್ಲದೆ ಶ್ರೀವಾದಿರಾಜರು ತಮ್ಮ ಲಕ್ಷಾಲಂಕಾರದಲ್ಲಿ ಹೀಗೆಯೇ ಪಾಠವನ್ನು ಹಿಡಿದು ವ್ಯಾಖ್ಯಾನ ಮಾಡಿದ್ದಾರೆ.

೨. **ಯದಾಶ್ರೌಷಂ ದ್ರೋಣಪುತ್ರಂ ಚ ಶೂರಂ**
**ದುಶ್ಶಾಸನಂ ಕೃತವರ್ಮಾಣಮುಗ್ರಮ್ ।**
**ಯುಧಿಷ್ಠಿರಂ ವೀರಮಮರ್ಷಯಂತಂ**
**ತದಾ ನಾಶಂಸೇ ವಿಜಯಾಯ ಸಂಜಯ ॥**

ಇದೂ ಆದಿಪರ್ವದ ಮೊದಲನೆಯ ಅಧ್ಯಾಯದಲ್ಲಿ ಬರುವ ಶ್ಲೋಕ. ಹೆಚ್ಚಿನ ಮುದ್ರಿತ ಪುಸ್ತಕದಲ್ಲಿ ಹೀಗೆ ಪಾಠವಿದೆ. ಒಂದು ಮುದ್ರಿತ ಪುಸ್ತಕದಲ್ಲಿ ಮೂರನೆಯ ಪಾದವು 'ಯುಧಿಷ್ಠಿರಂ ಧರ್ಮರಾಜಂ ಜಯಂತಂ' ಎಂದಿದೆ. ಇದಂತೂ ವಿರುದ್ಧವಾದ ಪಾಠ. ಇದು ಧೃತರಾಷ್ಟ್ರನು ಸಂಜಯನಿಗೆ ಹೇಳುವ ಮಾತು. ಮೇಲೆ ಹೇಳಿದ ಎರಡು ಪಾಠಗಳಲ್ಲಿಯೂ ಈ ಅರ್ಥವು ಅಸಂಗತವಾಗುತ್ತದೆ. ''ವೀರನಾದ ಯುಧಿಷ್ಠಿರನನ್ನು ಅಶ್ವತ್ಥಾಮಾದಿಗಳು ಪರಾಭವಗೊಳಿಸಲಿಲ್ಲ, ಆದ್ದರಿಂದ ನನಗೆ ವಿಜಯ ಆಶೆ ಇಲ್ಲ'' ಇದು ಈ ಶ್ಲೋಕದ ಅರ್ಥ. ಇದರಲ್ಲಿ ಯಾವ ಸಮರ್ಥನೆಯೂ ತೋರುವುದಿಲ್ಲ. ವೀರನಾದ್ದರಿಂದಲೇ ಧರ್ಮರಾಜನು ಅವರಿಗೆ ವಶನಾಗಲಿಲ್ಲ. ಇದರಲ್ಲಿ ಅನುಪಪತ್ತಿ ಏನು? ಅಲ್ಲದೆ ಅಶ್ವತ್ಥಾಮಾದಿಗಳನ್ನು ಶೂರರೆಂದು ಕರೆಯುವುದರಲ್ಲಿ ಯಾವ ಔಚಿತ್ಯವೂ ಇರುವುದಿಲ್ಲ. ಎರಡನೆಯ ಪಾಠದಲ್ಲಿಯೂ ''ವೀರನಾದ ಯುಧಿಷ್ಠಿರನನ್ನು ಶೂರರಾದ ಅಶ್ವತ್ಥಾಮಾದಿಗಳು ಜಯಿಸಿದ್ದರಿಂದ ನನಗೆ ವಿಜಯದ ಆಶೆ ಇಲ್ಲ'' ಎಂಬ ಅರ್ಥವು ಬರುವುದರಿಂದ ಇದು ವಿರುದ್ಧ ಮತ್ತು ಹಾಸ್ಯಾಸ್ಪದವಾಗುತ್ತದೆ.

ತಾಳೆಗರಿಗಳಲ್ಲಿರುವ ಪಾಠದಲ್ಲಿ ಮೂರನೆಯ ಪಾದ ಈ ರೀತಿ ಇದೆ. 'ಯುಧಿಷ್ಠಿರಂ ಶೂನ್ಯಮಧರ್ಷಯಂತಂ' ಎಂದು.

ಇಲ್ಲಿರುವ ಶೂನ್ಯಶಬ್ದವು ಯಾರಿಗೂ ಅರ್ಥವಾಗಲಿಲ್ಲವಾದ ಕಾರಣ ಅದನ್ನು 'ವೀರಂ' ಎಂದು ತಿದ್ದಿ ಅಸಂಗತಿಯನ್ನು ಉಂಟು ಮಾಡಿದ್ದಾರೆ. 'ಶೂನ್ಯಂ' ಎಂಬ ಪಾಠದ ಸ್ವಾರಸ್ಯವನ್ನು ಗಮನಿಸಿ. 'ಶೂನ್ಯಂ' ಎಂದರೆ ರಹಿತನಾದವನನ್ನು ಎಂದರ್ಥ. ಪ್ರಕೃತಸಂದರ್ಭದಲ್ಲಿ ಭೀಮಾರ್ಜುನರಿಂದ ರಹಿತನಾದವನು, ಎಂದರೆ ಭೀಮಾರ್ಜುನರಿಂದ ದೂರದಲ್ಲಿದ್ದವನು ಎಂದರ್ಥ. ದ್ರೋಣರು ಸೇನಾಧಿಪತ್ಯವನ್ನು ವಹಿಸಿಕೊಂಡ ಕ್ಷಣದಿಂದ 'ಭೀಮಾರ್ಜುನರನ್ನು ಧರ್ಮರಾಜನಿಂದ ದೂರಮಾಡಿದರೆ ಧರ್ಮರಾಜನನ್ನು ಜೀವಂತವಾಗಿ ಸೆರೆ ಹಿಡಿಯುತ್ತೇನೆ ಎಂದು ತಿಳಿಸಿದ್ದಾರೆ. ಧರ್ಮರಾಜನು ಸ್ವತಃ ದುರ್ಬಲ. ಭೀಮಾರ್ಜುನರ ಬಲವೇ ಅವನಿಗೆ ಬಲ. ಆದ್ದರಿಂದ ಹೀಗೆ ಮಾಡಿದರೆ ಅವನನ್ನು ಸೆರೆ ಹಿಡಿಯಬಹುದೆಂದು ದ್ರೋಣರ ಎಣಿಕೆ. ಆದರೆ ಭೀಮಾರ್ಜುನರಿಂದ ದೂರಮಾಡಲ್ಪಟ್ಟ ಧರ್ಮರಾಜನನ್ನು ಶೂರರಾದ ಅಶ್ವತ್ಥಾಮಾದಿಗಳು

ಸೆರೆ ಹಿಡಿಯಲಾಗಲಿಲ್ಲ ಎಂಬ ವಾರ್ತೆ ಧೃತರಾಷ್ಟ್ರನಿಗೆ ಬಂದಿದೆ. ಆಗ ಧೃತರಾಷ್ಟ್ರನ ಮಾತಿದು ''ಸ್ವತಃ ಶೂರರೂ ಬಲಿಷ್ಠರೂ ಆದ ಅಶ್ವತ್ಥಾಮಾದಿಗಳು ಸ್ವತಃ ದುರ್ಬಲನಾಗಿಯೂ ಭೀಮಾರ್ಜುನರಿಂದ ರಹಿತನಾಗಿಯೂ ಇರುವ ಧರ್ಮರಾಜನನ್ನು ಸೆರೆ ಹಿಡಿಯಲಾಗಲಿಲ್ಲ ಎಂದಮೇಲೆ ನನಗೆ ಜಯದ ಆಶೆ ಇಲ್ಲ'. ಇದು ಧೃತರಾಷ್ಟ್ರನ ತರ್ಕಬದ್ಧವಾದ ಉಪಪಾದನೆ. ಈ ಶುದ್ಧಪಾಠವನ್ನು ಅರ್ಥಮಾಡಿಕೊಳ್ಳಲಾಗದೆ ಪಾಠವನ್ನೇ ತಿದ್ದಿ ಮೂಲಕಾರರಿಗೆ ಮಾಡಿರುವ ಅಪರಾಧ ಇದು.

ಲಕ್ಷಾಲಂಕಾರದಲ್ಲಿ ಶ್ರೀವಾದಿರಾಜರು ಮೂರನೆಯ ಪಾದದಲ್ಲಿ 'ಶೂನ್ಯಂ' ಎಂಬ ಪದವನ್ನೇ ಹಿಡಿದು ಮೇಲೆ ಹೇಳಿದಂತೆ ವ್ಯಾಖ್ಯಾನ ಮಾಡಿದ್ದಾರೆ. ಇದರಿಂದಲೂ ತಾಳೆಗರಿಗಳ ಪಾಠಗಳು ಎಷ್ಟು ಶುದ್ಧವಾದವು ಎಂದು ತಿಳಿಯುತ್ತದೆ.

೩. **ಉಭೇ ಸಂಧ್ಯೇ ಜಪನ್ ಕಿಂಚಿತ್ ಸದ್ಯೋ ಮುಚ್ಯೇತ ಕಿಲ್ಬಿಷಾತ್ ।**
**ಅನುಕ್ರಮಣ್ಯಾ ಯಾವತ್ ಸ್ಯಾದಹ್ನಾ ರಾತ್ರ್ಯಾ ಚ ಸಂಚಿತಮ್ ।**
**ಭಾರತಸ್ಯ ವಪುರ್ಹ್ಯೇತತ್ ಸತ್ಯಂ ಚಾನೃತಮೇವ ಚ ॥**

ಇದೂ ಆದಿಪರ್ವದ ಅನುಕ್ರಮಣಿಕಾಧ್ಯಾಯದಲ್ಲಿ ಕೊನೆಯಲ್ಲಿ ಬರುವ ಒಂದು ಶ್ಲೋಕ. ಮೇಲೆ ತೋರಿಸಿರುವುದು ಮುದ್ರಿತ ಪುಸ್ತಕಗಳಲ್ಲಿ ಕಂಡುಬರುವ ಪಾಠ. ಅನುಕ್ರಮಣಿಕಾಧ್ಯಾಯವನ್ನು ಎರಡು ಸಂಧ್ಯಾಕಾಲದಲ್ಲೂ ಸ್ವಲ್ಪ ಜಪಮಾಡುವವನು ಹಗಲು ಮತ್ತು ರಾತ್ರಿ ಮಾಡಿದ ಪಾಪಗಳಿಂದ ತತ್‌ಕ್ಷಣದಲ್ಲಿ ಮುಕ್ತನಾಗುತ್ತಾನೆ ಎಂದು ಮೊದಲನೆಯ ಎರಡು ಸಾಲುಗಳ ತಾತ್ಪರ್ಯ. ಸತ್ಯ ಮತ್ತು ಅನೃತಗಳು ಭಾರತಗ್ರಂಥದ ಸ್ವರೂಪ ಎಂದು ಮೂರನೆಯ ಸಾಲಿನ ಅರ್ಥ. ಸತ್ಯವನ್ನು ಭಾರತದ ಸ್ವರೂಪವೆಂದು ಹೇಳಬಹುದು. ಆದರೆ ಅನೃತವು ಭಾರತದ ಸ್ವರೂಪವಾಗುವುದು ಹೇಗೆ? ಇದು ಸರಿಯಲ್ಲ ಎಂದು ಯೋಚಿಸಿ ಅನೃತಶಬ್ದವನ್ನು ಅಮೃತ ಎಂದು ತಿದ್ದಿದ್ದಾರೆ. ಸತ್ಯ ಮತ್ತು ಅಮೃತ ಭಾರತದ ಸ್ವರೂಪ ಎಂದು ಸಿದ್ಧಿಸುತ್ತದೆ ಎಂದು ಮನಸ್ಸಿಗೆ ಸಮಾಧಾನವನ್ನು ತಂದುಕೊಂಡರೆ ಆದರೆ ತಾಳೆಗರಿಗಳಲ್ಲಿ ಈ ಶ್ಲೋಕದ ಪಾಠವೇ ಬೇರೆ ರೀತಿಯಾಗಿದೆ.

**''ಉಭೇ ಸಂಧ್ಯೇ ಜಪನ್ ಕಿಂಚಿತ್ ಸದ್ಯೋ ಮುಚ್ಯೇತ ಕಿಲ್ಬಿಷಾತ್ ।**
**ಅನುಕ್ರಾಮಣಮಧ್ಯಾಯಮಹೋರಾತ್ರ್ಯಾ ಚ ಸಂಚಿತಮ್।**
**ಭಾರತಶ್ರಾವಪುಣ್ಯೇನ ಸತ್ಯಂ ಚಾನೃತಮೇವ ಚ ।**
**ನವನೀತಂ ಯಥಾ ದಧ್ನ್ಯಃ .. ತಥಾ ಭಾರತಮುಚ್ಯತೇ॥''**

ಇನ್ನು ವಾದಿರಾಜರು ಲಕ್ಷಾಲಂಕಾರದಲ್ಲಿ ಹೀಗೆಯೇ ಉದಾಹರಿಸಿ ಮುಂದಿನ ಶ್ಲೋಕದಿಂದ 'ಯಥಾ, ತಥಾ' ಶಬ್ದಗಳನ್ನು ಅನುಕರ್ಷಮಾಡಿ

೨. **ಯದಾಶ್ರೌಷಂ ದ್ರೋಣಪುತ್ರಂ ಚ ಶೂರಂ**
**ದುಶ್ಶಾಸನಂ ಕೃತವರ್ಮಾಣಮುಗ್ರಮ್ ।**
**ಯುಧಿಷ್ಠಿರಂ ವೀರಮಮರ್ಷಯಂತಂ**
**ತದಾ ನಾಶಂಸೇ ವಿಜಯಾಯ ಸಂಜಯ ॥**

ಇದೂ ಆದಿಪರ್ವದ ಮೊದಲನೆಯ ಅಧ್ಯಾಯದಲ್ಲಿ ಬರುವ ಶ್ಲೋಕ. ಹೆಚ್ಚಿನ ಮುದ್ರಿತ ಪುಸ್ತಕದಲ್ಲಿ ಹೀಗೆ ಪಾಠವಿದೆ. ಒಂದು ಮುದ್ರಿತ ಪುಸ್ತಕದಲ್ಲಿ ಮೂರನೆಯ ಪಾದವು 'ಯುಧಿಷ್ಠಿರಂ ಧರ್ಮರಾಜಂ ಜಯಂತಂ' ಎಂದಿದೆ. ಇದಂತೂ ವಿರುದ್ಧವಾದ ಪಾಠ. ಇದು ಧೃತರಾಷ್ಟ್ರನು ಸಂಜಯನಿಗೆ ಹೇಳುವ ಮಾತು. ಮೇಲೆ ಹೇಳಿದ ಎರಡು ಪಾಠಗಳಲ್ಲಿಯೂ ಈ ಅರ್ಥವು ಅಸಂಗತವಾಗುತ್ತದೆ. ''ವೀರನಾದ ಯುಧಿಷ್ಠಿರನನ್ನು ಅಶ್ವತ್ಥಾಮಾದಿಗಳು ಪರಾಭವಗೊಳಿಸಲಿಲ್ಲ, ಆದ್ದರಿಂದ ನನಗೆ ವಿಜಯ ಆಶೆ ಇಲ್ಲ'' ಇದು ಈ ಶ್ಲೋಕದ ಅರ್ಥ. ಇದರಲ್ಲಿ ಯಾವ ಸಮರ್ಥನೆಯೂ ತೋರುವುದಿಲ್ಲ. ವೀರನಾದ್ದರಿಂದಲೇ ಧರ್ಮರಾಜನು ಅವರಿಗೆ ವಶನಾಗಲಿಲ್ಲ, ಇದರಲ್ಲಿ ಅನುಪಪತ್ತಿ ಏನು? ಅಲ್ಲದೆ ಅಶ್ವತ್ಥಾಮಾದಿಗಳನ್ನು ಶೂರರೆಂದು ಕರೆಯುವುದರಲ್ಲಿ ಯಾವ ಔಚಿತ್ಯವೂ ಇರುವುದಿಲ್ಲ. ಎರಡನೆಯ ಪಾಠದಲ್ಲಿಯೂ ''ವೀರನಾದ ಯುಧಿಷ್ಠಿರನನ್ನು ಶೂರರಾದ ಅಶ್ವತ್ಥಾಮಾದಿಗಳು ಜಯಿಸಿದ್ದರಿಂದ ನನಗೆ ವಿಜಯದ ಆಶೆ ಇಲ್ಲ'' ಎಂಬ ಅರ್ಥವು ಬರುವುದರಿಂದ ಇದು ವಿರುದ್ಧ ಮತ್ತು ಹಾಸ್ಯಾಸ್ಪದವಾಗುತ್ತದೆ.

ತಾಳೆಗರಿಗಳಲ್ಲಿರುವ ಪಾಠದಲ್ಲಿ ಮೂರನೆಯ ಪಾದ ಈ ರೀತಿ ಇದೆ. 'ಯುಧಿಷ್ಠಿರಂ ಶೂನ್ಯಮಧರ್ಷಯಂತಂ' ಎಂದು.

ಇಲ್ಲಿರುವ ಶೂನ್ಯಶಬ್ದವು ಯಾರಿಗೂ ಅರ್ಥವಾಗಲಿಲ್ಲವಾದ ಕಾರಣ ಅದನ್ನು 'ವೀರಂ' ಎಂದು ತಿದ್ದಿ ಅಸಂಗತಿಯನ್ನು ಉಂಟು ಮಾಡಿದ್ದಾರೆ. 'ಶೂನ್ಯಂ' ಎಂಬ ಪಾಠದ ಸ್ವಾರಸ್ಯವನ್ನು ಗಮನಿಸಿ. 'ಶೂನ್ಯಂ' ಎಂದರೆ ರಹಿತನಾದವನನ್ನು ಎಂದರ್ಥ. ಪ್ರಕೃತಸಂದರ್ಭದಲ್ಲಿ ಭೀಮಾರ್ಜುನರಿಂದ ರಹಿತನಾದವನು, ಎಂದರೆ ಭೀಮಾರ್ಜುನರಿಂದ ದೂರದಲ್ಲಿದ್ದವನು ಎಂದರ್ಥ. ದ್ರೋಣರು ಸೇನಾಧಿಪತ್ಯವನ್ನು ವಹಿಸಿಕೊಂಡ ಕ್ಷಣದಿಂದ 'ಭೀಮಾರ್ಜುನರನ್ನು ಧರ್ಮರಾಜನಿಂದ ದೂರಮಾಡಿದರೆ ಧರ್ಮರಾಜನನ್ನು ಜೀವಂತವಾಗಿ ಸೆರೆ ಹಿಡಿಯುತ್ತೇನೆ ಎಂದು ತಿಳಿಸಿದ್ದಾರೆ. ಧರ್ಮರಾಜನು ಸ್ವತಃ ದುರ್ಬಲ. ಭೀಮಾರ್ಜುನರ ಬಲವೇ ಅವನಿಗೆ ಬಲ. ಆದ್ದರಿಂದ ಹೀಗೆ ಮಾಡಿದರೆ ಅವನನ್ನು ಸೆರೆ ಹಿಡಿಯಬಹುದೆಂದು ದ್ರೋಣರ ಎಣಿಕೆ. ಆದರೆ ಭೀಮಾರ್ಜುನರಿಂದ ದೂರಮಾಡಲ್ಪಟ್ಟ ಧರ್ಮರಾಜನನ್ನು ಶೂರರಾದ ಅಶ್ವತ್ಥಾಮಾದಿಗಳು

ಸೆರೆ ಹಿಡಿಯಲಾಗಲಿಲ್ಲ ಎಂಬ ವಾರ್ತೆ ಧೃತರಾಷ್ಟ್ರನಿಗೆ ಬಂದಿದೆ. ಆಗ ಧೃತರಾಷ್ಟ್ರನ ಮಾತಿದು ''ಸ್ವತಃ ಶೂರರೂ ಬಲಿಷ್ಠರೂ ಆದ ಅಶ್ವತ್ಥಾಮಾದಿಗಳು ಸ್ವತಃ ದುರ್ಬಲನಾಗಿಯೂ ಭೀಮಾರ್ಜುನರಿಂದ ರಹಿತನಾಗಿಯೂ ಇರುವ ಧರ್ಮರಾಜನನ್ನು ಸೆರೆ ಹಿಡಿಯಲಾಗಲಿಲ್ಲ ಎಂದಮೇಲೆ ನನಗೆ ಜಯದ ಆಶೆ ಇಲ್ಲ'. ಇದು ಧೃತರಾಷ್ಟ್ರನ ತರ್ಕಬದ್ಧವಾದ ಉಪಪಾದನೆ. ಈ ಶುದ್ಧಪಾಠವನ್ನು ಅರ್ಥಮಾಡಿಕೊಳ್ಳಲಾಗದೆ ಪಾಠವನ್ನೇ ತಿದ್ದಿ ಮೂಲಕಾರರಿಗೆ ಮಾಡಿರುವ ಅಪರಾಧ ಇದು.

ಲಕ್ಷಾಲಂಕಾರದಲ್ಲಿ ಶ್ರೀವಾದಿರಾಜರು ಮೂರನೆಯ ಪಾದದಲ್ಲಿ 'ಶೂನ್ಯಂ' ಎಂಬ ಪದವನ್ನೇ ಹಿಡಿದು ಮೇಲೆ ಹೇಳಿದಂತೆ ವ್ಯಾಖ್ಯಾನ ಮಾಡಿದ್ದಾರೆ. ಇದರಿಂದಲೂ ತಾಳೆಗರಿಗಳ ಪಾಠಗಳು ಎಷ್ಟು ಶುದ್ಧವಾದವು ಎಂದು ತಿಳಿಯುತ್ತದೆ.

೩. **ಉಭೇ ಸಂಧ್ಯೇ ಜಪನ್ ಕಿಂಚಿತ್ ಸದ್ಯೋ ಮುಚ್ಯೇತ ಕಿಲ್ಬಿಷಾತ್ ।**
**ಅನುಕ್ರಮಣ್ಯಾ ಯಾವತ್ ಸ್ಯಾದಹ್ನಾ ರಾತ್ರ್ಯಾ ಚ ಸಂಚಿತಮ್ ।**
**ಭಾರತಸ್ಯ ವಪುರ್ಹ್ಯೇತತ್ ಸತ್ಯಂ ಚಾನ್ಯತಮೇವ ಚ ॥**

ಇದೂ ಆದಿಪರ್ವದ ಅನುಕ್ರಮಣಿಕಾಧ್ಯಾಯದಲ್ಲಿ ಕೊನೆಯಲ್ಲಿ ಬರುವ ಒಂದು ಶ್ಲೋಕ. ಮೇಲೆ ತೋರಿಸಿರುವುದು ಮುದ್ರಿತ ಪುಸ್ತಕಗಳಲ್ಲಿ ಕಂಡುಬರುವ ಪಾಠ. ಅನುಕ್ರಮಣಿಕಾಧ್ಯಾಯವನ್ನು ಎರಡು ಸಂಧ್ಯಾಕಾಲದಲ್ಲೂ ಸ್ವಲ್ಪ ಜಪಮಾಡುವವನು ಹಗಲು ಮತ್ತು ರಾತ್ರಿ ಮಾಡಿದ ಪಾಪಗಳಿಂದ ತತ್‌ಕ್ಷಣದಲ್ಲಿ ಮುಕ್ತನಾಗುತ್ತಾನೆ ಎಂದು ಮೊದಲನೆಯ ಎರಡು ಸಾಲುಗಳ ತಾತ್ಪರ್ಯ. ಸತ್ಯ ಮತ್ತು ಅನೃತಗಳು ಭಾರತಗ್ರಂಥದ ಸ್ವರೂಪ ಎಂದು ಮೂರನೆಯ ಸಾಲಿನ ಅರ್ಥ. ಸತ್ಯವನ್ನು ಭಾರತದ ಸ್ವರೂಪವೆಂದು ಹೇಳಬಹುದು. ಆದರೆ ಅನೃತವು ಭಾರತದ ಸ್ವರೂಪವಾಗುವುದು ಹೇಗೆ? ಇದು ಸರಿಯಲ್ಲ ಎಂದು ಯೋಚಿಸಿ ಅನೃತಶಬ್ದವನ್ನು ಅಮೃತ ಎಂದು ತಿದ್ದಿದ್ದಾರೆ. ಸತ್ಯ ಮತ್ತು ಅಮೃತ ಭಾರತದ ಸ್ವರೂಪ ಎಂದು ಸಿದ್ಧಿಸುತ್ತದೆ ಎಂದು ಮನಸ್ಸಿಗೆ ಸಮಾಧಾನವನ್ನು ತಂದುಕೊಂಡರೆ ಆದರೆ ತಾಳೆಗರಿಗಳಲ್ಲಿ ಈ ಶ್ಲೋಕದ ಪಾಠವೇ ಬೇರೆ ರೀತಿಯಾಗಿದೆ.

**''ಉಭೇ ಸಂಧ್ಯೇ ಜಪನ್ ಕಿಂಚಿತ್ ಸದ್ಯೋ ಮುಚ್ಯೇತ ಕಿಲ್ಬಿಷಾತ್ ।**
**ಅನುಕ್ರಾಮಣಮಧ್ಯಾಯಮಹೋರಾತ್ರ್ಯಾ ಚ ಸಂಚಿತಮ್।**
**ಭಾರತಶ್ರಾವಪುಣ್ಯೇನ ಸತ್ಯಂ ಚಾನ್ಯತಮೇವ ಚ ।**
**ನವನೀತಂ ಯಥಾ ದಧ್ನಃ .. ತಥಾ ಭಾರತಮುಚ್ಯತೇ॥''**

ಇನ್ನು ವಾದಿರಾಜರು ಲಕ್ಷಾಲಂಕಾರದಲ್ಲಿ ಹೀಗೆಯೇ ಉದಾಹರಿಸಿ ಮುಂದಿನ ಶ್ಲೋಕದಿಂದ 'ಯಥಾ, ತಥಾ' ಶಬ್ದಗಳನ್ನು ಅನುಕರ್ಷಮಾಡಿ

'ಅನುಕ್ರಾಮಣಮಧ್ಯಾಯಂ' ಎಂಬ ಶ್ಲೋಕಕ್ಕೆ ಅರ್ಥಮಾಡಬೇಕೆಂದು ತಿಳಿಸಿದ್ದಾರೆ. ಮೂರನೆಯ ಸಾಲಿನಲ್ಲಿ 'ಭಾರತಸ್ಯ ವಪುರ್ಹ್ಯೇತತ್' ಬದಲಾಗಿ 'ಭಾರತಶ್ರಾವ್ಯಪುಣ್ಯೇನ' ಎಂದಿದೆ. ತಾತ್ಪರ್ಯ ಹೀಗೆ — ''ಹಗಲು ಸತ್ಯದೊಡನೆ ಸಂಬದ್ಧವಾಗಿದೆ. ರಾತ್ರಿಯು ಚೌರ್ಯ ಮೊದಲಾದ ಕೃತ್ಯಗಳ ಅವಕಾಶದಿಂದ ಅನೃತದೊಡನೆ ಸಂಬದ್ಧವಾಗಿದೆ. ಹೇಗೆ ಹಗಲು ರಾತ್ರಿಗಳು ಸತ್ಯ, ಅನೃತದೊಡನೆ ಸಂಬದ್ಧವಾಗಿವೆಯೋ, ಹಾಗೆ ಅನುಕ್ರಮಣಿಕಾಧ್ಯಾಯವು ಸಮಗ್ರ ಭಾರತಶ್ರವಣಜನ್ಯ- ಪುಣ್ಯದಿಂದ ಸಂಬದ್ಧವಾಗಿದೆ ಎಂದು ಜ್ಞಾನಿಗಳು ಹೇಳುತ್ತಾರೆ'' ಎಂದು. ಎಂದರೆ ಅನುಕ್ರಮಣಿಕಾಧ್ಯಾಯವನ್ನು ಶ್ರವಣಮಾಡಿದರೆ ಸಮಗ್ರ ಭಾರತವನ್ನು ಶ್ರವಣ ಮಾಡಿದ ಪುಣ್ಯವು ದೊರೆಯುತ್ತದೆ ಎಂದು. ಈ ಅರ್ಥವನ್ನು ತಿಳಿದುಕೊಳ್ಳಲಾಗದೇ ತಪ್ಪು ಪಾಠಗಳನ್ನು ಇಟ್ಟು ಕೊಂಡು ಅರ್ಥಮಾಡಲು ಹೆಣಗಿರುವುದು ಈ ಸಂದರ್ಭದಲ್ಲಿ ಕಂಡು ಬರುತ್ತದೆ.

**೪. ಪಾಣೌ ಗೃಹೀತಃ ಪುತ್ರೇತಿ ಕೌರವ್ಯೋ ರೂಪದರ್ಪಿತಃ ।**
**ವಿಚಿತ್ರವೀರ್ಯೋ ಧರ್ಮಾತ್ಮಾ ಕಾಮಾತ್ಮಾ ಸಮಪದ್ಯತ ॥**

ಇದು ಸಂಭವಪರ್ವದಲ್ಲಿ ಬರುವ ಒಂದು ಶ್ಲೋಕ. ಹೀಗೆಯೇ ಮುದ್ರಿತ ಪುಸ್ತಕಗಳಲ್ಲಿ ಕಂಡು ಬರುತ್ತದೆ. ಇದಕ್ಕೆ ಅರ್ಥವನ್ನು ಹೇಳುವುದೇ ಕಷ್ಟ. ಏನು ಹೇಳಿದರೂ ಅಸಂಗತವಾಗುತ್ತದೆ.

'ಪಾಣಿಗೃಹೀತನಾದವನು ಮಗನೆಂದು ಕುರುವಂಶದಲ್ಲಿ ಜನಿಸಿದ ವಿಚಿತ್ರವೀರ್ಯನು ರೂಪದರ್ಪಿತನಾಗಿ ಧರ್ಮಾತ್ಮನಾಗಿದ್ದವನು ಕಾಮಾತ್ಮನಾದನು' ಎಂದು ಅರ್ಥ ತೋರುತ್ತದೆ. ಇದರಲ್ಲಿ ಒಂದಕ್ಕೊಂದು ಸಂಬಂಧವೇ ಇಲ್ಲ. ತಾಳೆಗರಿಗಳಲ್ಲಿರುವ ಪಾಠವನ್ನು ಗಮನಿಸಿ –

**ಪಾಣೌ ಗೃಹೀತಃ ಪುತ್ರೇತಿ ವೇದೇ ಚ ಕಥಿತಂ ಭೃಶಮ್।**
**ಧರ್ಮಂ ಮನಸಿ ಸಂಸ್ಥಾಪ್ಯ ಬ್ರಾಹ್ಮಣಾನ್ ತಾಃ ಸಮಭ್ಯಯುಃ॥**

ಇದೂ ಸುಲಭವಾಗಿ ಅರ್ಥವಾಗುವುದಿಲ್ಲ. ವಾದಿರಾಜರು ಲಕ್ಷಾಲಂಕಾರದಲ್ಲಿ ಈ ಶ್ಲೋಕದ ಪಾಠವನ್ನು ಹೀಗೆಯೇ ಹಿಡಿದು ಅರ್ಥವನ್ನು ವಿವರಿಸಿದ್ದಾರೆ.

ಧಾರಾಪೂರ್ವಕವಾಗಿ ಸ್ವೀಕರಿಸಿದ ದತ್ತುಪುತ್ರನೇ ಪಿತೃಗಳನ್ನು ನರಕದಿಂದ ರಕ್ಷಿಸುತ್ತಾನೆ ಎಂದು ವೇದದಲ್ಲಿ ಚೆನ್ನಾಗಿ ಹೇಳಲ್ಪಟ್ಟಿದೆ. ಹೀಗಿರುವಾಗ ಔರಸಪುತ್ರನಿಂದ ಸದ್ಗತಿಯಾಗುವುದರಲ್ಲಿ ಸಂದೇಹವಿಲ್ಲ ಎಂದು ಮನಸ್ಸಿನಲ್ಲಿ ಯೋಚಿಸಿ ತಮ್ಮ ಪತಿಗಳನ್ನು ಕಳೆದುಕೊಂಡ ಕ್ಷತ್ರಿಯ ಸ್ತ್ರೀಯರು ಮಗನನ್ನು ಪಡೆಯುವುದಕ್ಕಾಗಿ ಬ್ರಾಹ್ಮಣರ ಬಳಿಗೆ

ಹೋದರು ಎಂದು ಅರ್ಥ ದೊರೆಯುತ್ತದೆ. ಇದರಲ್ಲಿ ಯಾವ ಅಸಂಗತಿಯೂ ಇಲ್ಲ. ಮುದ್ರಿತಪುಸ್ತಕಗಳ ಪಾಠದಲ್ಲಿ ಪಾಣಿಗೃಹೀತ ಪುತ್ರನಿಗೂ, ರೂಪದರ್ಶಿತನಾದ ವಿಚಿತ್ರವೀರ್ಯನು ಧರ್ಮಾತ್ಮನಾಗಿದ್ದವನು ಕಾಮಾತ್ಮ ನಾಗುವುದಕ್ಕೂ ಯಾವ ಸಂಬಂಧವೂ ಇರುವುದಿಲ್ಲ.

ಇದರಿಂದ ತಾಳೆಗರಿಯ ಪಾಠಗಳು ಎಷ್ಟು ಪ್ರಾಮಾಣಿಕ ಎಂದು ತಿಳಿಯುತ್ತದೆ. ಇಂತಹ ಅನೇಕಾನೇಕ ಉದಾಹರಣೆಗಳನ್ನು ಕೊಡಬಹುದು.

## ಲಕ್ಷಾಲಂಕಾರ ವ್ಯಾಖ್ಯಾನದ ಸ್ವಾರಸ್ಯಗಳು

೧. **ತವ ವಾ ನಾಹುಷ ಕುಲೇ ಕಃ ಸ್ತ್ರಿಯಂ ಸ್ಪ್ರಷ್ಟುಮರ್ಹತಿ** (ಆದಿ 71-20)

ಇದು ಶರ್ಮಿಷ್ಠೆಯು ಯಯಾತಿಗೆ ಹೇಳುವ ಮಾತು. ಯಯಾತಿಯೇ, ನಿಮ್ಮ ಕುಲದಲ್ಲಿ ಯಾವನು ಸ್ತ್ರೀಯನ್ನು ಮುಟ್ಟಬಲ್ಲ ಎಂದು ಅರ್ಥವಾಗುತ್ತದೆ. ವಾದಿರಾಜರು ತವಕುಲೇ ಎಂಬುದಕ್ಕೆ ವಿದ್ಯಮಾನಾಂ ಎಂದು ಅಧ್ಯಾಹಾರವನ್ನು ಮಾಡಿ ನಿನ್ನ ಕುಲದಲ್ಲಿರುವ ಸ್ತ್ರೀಯನ್ನು ಯಾವ ಇನ್ನೊಬ್ಬನು ಮುಟ್ಟಬಲ್ಲ ಎಂದು ಅರ್ಥಮಾಡಿದ್ದಾರೆ. ಹೀಗೆ ಮಾಡದಿದ್ದರೆ ಶ್ಲೋಕದ ಅರ್ಥವು ಅಸಂಗತವಾಗುತ್ತದೆ.

೨. **ಅಪಾಪಾಂ ಪಾಪವರ್ಧಿನೀಮ್** (ಆದಿ 72-18)

ದೇವಯಾನಿಯು ಮದ್ಯಪಾನವನ್ನು ಮಾಡಿ ಯಯಾತಿಯನ್ನು ನಿಂದಿಸುತ್ತಿರುವಾಗ ಯಯಾತಿಯು ಅವಳನ್ನು ಗದರಿಸುವ ಸಂದರ್ಭದಲ್ಲಿ ಈ ಮಾತು ಬಂದಿದೆ. ಪಾಪವಿಲ್ಲದವಳು ಮತ್ತು ಹೆಚ್ಚುಪಾಪವನ್ನು ಸಂಪಾದನೆ ಮಾಡುತ್ತಿರುವವಳು ಎಂದು ಅರ್ಥವಾಗುತ್ತದೆ. ಇದು ವ್ಯಾಹತ. ಆದ್ದರಿಂದ ರಾಜರು, ಸ್ವಾಭಾವಿಕವಾಗಿ ಪಾಪವಿಲ್ಲದವಳು ಆದರೆ ಮದ್ಯಪಾನದಿಂದುಂಟಾದ ಭ್ರಾಂತಿಯಿಂದ ಪತಿಯನ್ನು ನಿಂದಿಸಿ ಅಧಿಕ ಪಾಪವನ್ನು ಸಂಪಾದನೆ ಮಾಡುತ್ತಿರುವವಳು ಎಂದು ಅರ್ಥಮಾಡಿ ವಿರೋಧವನ್ನು ಪರಿಹರಿಸಿದ್ದಾರೆ.

೩. **ಸ ಚೋಡುಪ್ಲವಸಂತಾರಸ್ತತ್ರನಿತ್ಯಂ ಭವಿಷ್ಯಸಿ** (ಆದಿ 73-12)

ಇದು ಯಯಾತಿಯು ತುರ್ವಸುವಿಗೆ ಶಾಪವನ್ನು ಕೊಡುತ್ತಾ ಹೇಳುವ ಮಾತು. ಉಡು ಎಂದರೆ ನಕ್ಷತ್ರ. ಪ್ಲವ ಎಂದರೆ ದೋಣಿ. ಆದ್ದರಿಂದ ಉಡುಪ್ಲವ ಶಬ್ದವು ಪರಸ್ಪರ ಅನನ್ವಿತವಾಗಿ ಕಾಣುತ್ತದೆ. ಅದಕ್ಕೆ ರಾಜರು, ಉಡುವತ್ ಎಂದು ಲುಪ್ತೋಪಮೆಯನ್ನು ಮಾಡಿ ಉಡುವಿನಂತೆ ಎಂದರೆ ನಕ್ಷತ್ರದಂತೆ ಅಲ್ಲಿಂದಿಲ್ಲಿಗೆ ಸಾಗುವ ದೋಣಿಯನ್ನು ನಡೆಸುವವನಾಗುತ್ತೀಯೆ ಎಂದು ಅರ್ಥಮಾಡಿ ಅನನ್ವಯವನ್ನು ಪರಿಹಾರಮಾಡಿದ್ದಾರೆ.

೪. ವೇದೋಕ್ತಂ ಸಂಭವಂ ಮಹ್ಯಮನೇನ
ಹೃದಯೋದ್ಭವಮ್ ತಸ್ಯ ಜಾತಮಿದಂ ಕೃತ್ಸ್ನಂ (ಆದಿ 74-25)

ಇದು ಯಯಾತಿಯು ತನ್ನ ಮಾತನ್ನು ಕೇಳಿದ ಪುರುವಿಗೆ ಆಶೀರ್ವಾದ ಮಾಡುತ್ತಾ ಹೇಳುವ ಮಾತು. ಈ ಶ್ಲೋಕದ ಅರ್ಥವೇ ತಿಳಿಯುವುದಿಲ್ಲ. ಆದಕ್ಕಾಗಿ ರಾಜರು ಹೀಗೆ ಅರ್ಥಮಾಡುತ್ತಾರೆ. ಸಂಭವ ಎಂಬುದು ಬಹುವ್ರೀಹಿ ಸಮಾಸ. ಯಾವುದರಿಂದ ಸಮೀಚೀನವಾದ ಏಳಿಗೆ ಉಂಟಾಗುತ್ತದೆಯೋ ಆದು ಸಂಭವ. ಅದು ಯಾವುದೆಂದರೆ ವೇದೋಕ್ತವಾದ ಯಾಗಾದಿರೂಪವಾದ ಕರ್ಮ. ಹೃದಯೋದ್ಭವ ಎಂದರೆ ಕಾಮ, ರತಿಸುಖೇಚ್ಛಾ ಎಂದು ಅರ್ಥ. ಪೂರುವು ತನ್ನ ಯೌವನವನ್ನು ಕೊಟ್ಟದುದರಿಂದ ನಾನು ವೇದೋಕ್ತವಾದ ಅನೇಕ ಯಜ್ಞಗಳನ್ನು ಮಾಡಿದೆ ಮತ್ತು ಕಾಮತೃಪ್ತಿಯನ್ನು ಪಡೆದೆ ಎಂದು ಅರ್ಥಮಾಡಿ ಎಲ್ಲವನ್ನೂ ಸಮಂಜಸವನ್ನಾಗಿ ಮಾಡಿದ್ದಾರೆ.

೫. ಪ್ರತಿಕೂಲಂ ಕರ್ಮಣಾಂ ಪಾಪಮಾಹುಃ ।
ತದ್ವರ್ತನೇ ಪ್ರಾಪಣೇ ಪಾಪಲೋಕ್ಯಮ್ ॥ (ಆದಿ 78-4)

ಇದು ಯಯಾತಿಯು ಅಷ್ಟಕನೊಡನೆ ಸಂವಾದಮಾಡುತ್ತಾ ಹೇಳುವ ಒಂದು ಮಾತು. ಸಾಹಿತ್ಯ ವ್ಯುತ್ಪತ್ತಿಯಿಂದ ಈ ಶ್ಲೋಕಕ್ಕೆ ಯಾವ ಅರ್ಥವನ್ನೂ ಹೇಳಲು ಸಾಧ್ಯವಿಲ್ಲ. ರಾಜರು ಒಗಟನ್ನು ಬಿಡಿಸಿದಂತೆ ಈ ಮಾತನ್ನು ಬಿಡಿಸುತ್ತಾರೆ. ಪಾಪಲೋಕ್ಯಂ = ಪಾಪಲೋಕ ಎಂದರೆ ನರಕಲೋಕ ಸಂಬಂಧಿಯಾದ ಎಂದರೆ ನರಕಸಾಧನವಾದ, ಪಾಪಂ = ಪಾಪವನ್ನು, ತದ್ವರ್ತನೇ = ಹಿಂದಿನ ಪ್ರಕರಣದಲ್ಲಿ ಪ್ರಸ್ತುತವಾದ ಸತ್ಕರ್ಮಗಳ ಪ್ರವರ್ತನೆಯ ವಿಷಯದಲ್ಲಿ ಮತ್ತು ಪ್ರಾಪಣೇ = ಸತ್ಕರ್ಮಫಲವಾದ ಸ್ವರ್ಗಾದಿ ಪ್ರಾಪ್ತಿಯ ವಿಷಯದಲ್ಲಿ, ಪ್ರತಿಕೂಲಂ = ಪ್ರತಿಬಂಧಕವಾದುದೆಂದು, ಆಹುಃ = ಜ್ಞಾನಿಗಳು ಹೇಳುತ್ತಾರೆ. ಹೀಗೆ ಮಾತನ್ನು ಬಿಡಿಸದಿದ್ದರೆ ಶ್ಲೋಕವು ಅಸಂಗತವಾಗಿ ಕಾಣುತ್ತಿತ್ತು.

೬. ರೇತೋಧಾಃ ಪುತ್ರಂ ನಯತಿ ನರದೇವ ಯಮಕ್ಷಯಮ್ (ಆದಿ 93-6)

ಇದು ದೇವತೆಗಳು ದುಷ್ಯಂತನನ್ನು ಕುರಿತು ಹೇಳುವ ಮಾತು. ಮೇಲೆ ತೋರುವ ಅನ್ವಯದಂತೆ ಎಲೈ ರಾಜನೇ, ಗರ್ಭಾಧಾನವನ್ನು ಮಾಡಿದವನು ಮಗನನ್ನು ಯಮಲೋಕಕ್ಕೆ ಕರೆದುಕೊಂಡು ಹೋಗುತ್ತಾನೆ ಎಂದು ಅರ್ಥವಾಗುತ್ತದೆ. ಇದು ಸರ್ವಶಾಸ್ತ್ರವಿರುದ್ಧವಾದ ಅರ್ಥ. ಆದಕ್ಕಾಗಿ ರಾಜರು, ರೇತೋಧಾಃ, ಪುತ್ರಂ ಎಂಬ ಎರಡು ಪದಗಳಲ್ಲಿರುವ ವಿಭಕ್ತಿಯನ್ನು ವಿನಿಮಯಮಾಡಿ ರೇತೋಧಾತಾರಂ, ಪುತ್ರಃ ಎಂದು ತೆಗೆದುಕೊಳ್ಳಬೇಕು, ಹಾಗೆಯೇ ಯಮಕ್ಷಯಮ್ ಎಂಬಲ್ಲಿ ಯಮ್

ಅಕ್ಷಯಮ್ ಎಂದು ಪದಚ್ಛೇದ ಎಂದು ತಿಳಿಸಿ ಶಾಸ್ತ್ರಸಮ್ಮತರೀತಿಯಲ್ಲಿ ಜನಿಸಿದ ಪುತ್ರನು ತನ್ನ ತಂದೆಗೆ ಅಕ್ಷಯಲೋಕ ಪ್ರಾಪ್ತಿಯನ್ನು ಉಂಟುಮಾಡುತ್ತಾನೆ ಎಂದು ಹೇಳಿ ಎಲ್ಲಾ ವಿರೋಧವನ್ನೂ ಪರಿಹಾರ ಮಾಡಿದ್ದಾರೆ.

**೭. ಗಂಗಾದ್ವಾರೇ ವಿಭಜನಂ ಭವಿತಾ ನಚಿರಾದಿವ** (ಆದಿ 102-21)

ಇದು ಋಚೀಕರು ದ್ರುಪದನ ಪುತ್ರನಾದ ಶಿಖಂಡಿಯನ್ನು ಕುರಿತು ಹೇಳುವ ಮಾತು. ವಿಭಜನಂ ಎಂಬ ಶಬ್ದಕ್ಕೆ ವಿಭಾಗ ಎಂದು ಕೋಶದಲ್ಲಿ ಸಿಗುವ ಅರ್ಥ. ಆ ಅರ್ಥದಿಂದ ಇಲ್ಲಿ ಏನೂ ಉಪಯೋಗವಿಲ್ಲ. ಆದ್ದರಿಂದ ರಾಜರು, ವಿಭಜನ ಎಂಬ ಶಬ್ದಕ್ಕೆ ವಿನಮಯ ಎಂದು ಅರ್ಥಮಾಡಿದ್ದಾರೆ. ತಮ್ಮಲ್ಲಿದ್ದ ಪದಾರ್ಥವನ್ನು ಕೊಟ್ಟು ತೆಗೆದುಕೊಂಡವರಿಂದ ಇನ್ನೊಂದು ವಸ್ತುವನ್ನು ಸ್ವೀಕರಿಸುವುದು ವಿನಿಮಯ. ಅದೇ ಇಲ್ಲಿ ವಿಭಜನ ಶಬ್ದಾರ್ಥ. ಅಲ್ಲಿ ಬರುವ ಗಂಧರ್ವರಾಜನಾದ ತುಂಬುರುವಿಗೆ ನಿನ್ನ ಸ್ತ್ರೀತ್ವವನ್ನು ಕೊಟ್ಟು ಅವನಿಂದ ಪುಂಸ್ತ್ವವನ್ನು ಪಡೆ ಎಂದು ಅಭಿಪ್ರಾಯ. ಹೀಗೆ ತಿಳಿಸಿ ಅನನ್ವಯದೋಷವನ್ನು ಪರಿಹಾರಮಾಡಿದ್ದಾರೆ.

**೮. ಪಾಣೌ ಗೃಹೀತಃ ಪುತ್ರೇತಿ ವೇದೇ ಚ ಕಥಿತಂ ಭೃಶಮ್**

(ಆದಿ 104-10)

ಇದು ಭೀಷ್ಮ ಸತ್ಯವತೀ ಸಂವಾದದಲ್ಲಿ ಬಂದ ಒಂದು ವಚನ. ಪಾಣಿಗ್ರಹಣ ಮಾಡಿಕೊಂಡವನು ಪುತ್ರನೆನಿಸುತ್ತಾನೆ ಎಂದು ವೇದದಲ್ಲಿ ಹೇಳಲ್ಪಟ್ಟಿದೆ ಎಂದು ಅರ್ಥವಾಗುತ್ತದೆ. ಇದು ಅಸಂಗತ. ರಾಜರು ಅರ್ಥವನ್ನು ಬಿಡಿಸಿ ಧಾರಾಪೂರ್ವಕವಾಗಿ ಪಾಣಿಯಿಂದ ಸ್ವೀಕರಿಸಿದ ದತ್ತಪುತ್ರನೂ ನರಕದಿಂದ ದಾಟಿಸುವವನಾಗುತ್ತಾನೆ. ಹೀಗಿರುವಾಗ ಔರಸಪುತ್ರನು ನರಕದಿಂದ ಉದ್ಧಾರ ಮಾಡುವುದರಲ್ಲಿ ಯಾವ ಸಂಶಯವಿದೆ ಎಂದು ಸ್ಪಷ್ಟಪಡಿಸುತ್ತಾರೆ.

**೯. ಸ್ವಾಂ ತು ಧಾತ್ರೇಯಿಕಾಂ ತಸ್ಮೈ ವೃದ್ಧಾಯ ಪ್ರಾಹಿಣೋತ್ ತದಾ**

(ಆದಿ 104-40)

ಇದೂ ಭೀಷ್ಮರ ವಚನ. ಬಲಿ ಎಂಬ ರಾಜನ ಪತ್ನಿಯಾದ ಸುದೇಷ್ಣೆಯು ನಿಯೋಗಪದ್ಧತಿಗೆ ಅನುಸಾರವಾಗಿ ತಾನು ದೀರ್ಘತಮಸ್ ಮುನಿಗಳ ಬಳಿಗೆ ಹೋಗದೆ, ಅವರು ಅಂಧರು ಮತ್ತು ವೃದ್ಧರೆಂದು ತಾನು ಇಷ್ಟಪಡದೆ ತನ್ನ ಧಾತ್ರೇಯಿಕೆಯನ್ನು ಕಳುಹಿಸಿದಳು ಎಂದು ಅರ್ಥ. ಧಾತ್ರೇಯಿಕೆ ಶಬ್ದಕ್ಕೆ ಎಲ್ಲರೂ ಧಾತ್ರೀ (ದಾದಿ) ಎಂದೇ ಅರ್ಥ ಮಾಡಿದ್ದಾರೆ. ರಾಜರು, ಧಾತ್ರಿಯ ಮಗಳು ಧಾತ್ರೇಯಿಕೆ ಎಂದು ಹೇಳಿ ಸ್ಪಷ್ಟಪಡಿಸಿದ್ದಾರೆ.

೧೦. **ಉತ್ತಿಷ್ಠನ್ನಸ್ತ್ರವೀದೇನಾಂ ತ್ವಂ ಭುಜಿಷ್ಯಾ ಭವಿಷ್ಯಸಿ** (ಆದಿ 108-39).

ವ್ಯಾಸರು ಅಂಬಿಕೆಯ ದಾಸಿಯ ಶಯನದಿಂದ ಏಳುತ್ತಾ ನೀನು ಭುಜಿಷ್ಯೆಯಾಗುತ್ತೀಯೆ ಎಂದು ಹೇಳಿದರು ಎಂದು ಅರ್ಥ. ಭುಜಿಷ್ಯಾ ಎಂದರೆ ದಾಸಿ ಎಂದು ಅರ್ಥ. ಅವಳು ಈಗಲೇ ದಾಸಿಯಾಗಿದ್ದಾಳೆ. ಆದ್ದರಿಂದ ನೀನು ದಾಸಿಯಾಗುವಿ ಎಂಬ ಅರ್ಥವು ಅಸಂಗತವಾದುದು. ಆದಕ್ಕಾಗಿ ರಾಜರು, ಪ್ರಮಾಣವನ್ನು ಉದಾಹರಿಸಿ ದಾಸಿಯಾಗಿದ್ದವಳು ರಾಜನಿಂದ ಪುತ್ರಜನ್ಮವನ್ನು ಪಡೆದರೆ ಅವಳು ಭುಜಿಷ್ಯೆ ಎನಿಸುತ್ತಾಳೆ. ಭುಜಿಷ್ಯೆಯಾದ ಮೇಲೆ ಅವಳು ಪುನಃ ದಾಸಿಯಾಗಿರುವುದಿಲ್ಲ ಎಂಬ ಸೂಕ್ಷ್ಮ ಪ್ರಮೇಯವನ್ನು ತಿಳಿಸಿದ್ದಾರೆ.

೧೧. **ಯುವಾಭ್ಯಾಂ ದುಷ್ಕರಂ ಹ್ಯೇತತ್ ವದಂತಿ ದ್ವಿಜಪುಂಗವಾಃ** (ಆದಿ 121-72)

ಇದು ಪಾಂಡುವು ಮೃತನಾದಾಗ ಋಷಿಗಳು ಕುಂತೀ ಮತ್ತು ಮಾದ್ರಿಯರನ್ನು ಉದ್ದೇಶಿಸಿ ಹೇಳುವ ಮಾತು. ನೀವಿಬ್ಬರೂ ಸಹಗಮನಮಾಡಲು ಸಾಧ್ಯವಿಲ್ಲ ಎಂದು ಬ್ರಾಹ್ಮಣರು ಹೇಳುತ್ತಾರೆ ಎಂದು ಅರ್ಥವಾಗುತ್ತದೆ. ಆದರೆ ಆ ಅರ್ಥ ಸರಿಯಲ್ಲ, ಇಬ್ಬರೂ ಸಹಗಮನವನ್ನು ಮಾಡಲು ಸ್ಪರ್ಧಿಸುತ್ತಿದ್ದಾರೆ. ಆದ್ದರಿಂದ ದುಷ್ಕರ ಶಬ್ದಕ್ಕೆ ಅಸಾಧ್ಯ ಎಂದು ಅರ್ಥವಲ್ಲ. ಮಾಡಬಾರದು ಎಂದಿಷ್ಟೇ ಅರ್ಥ. ದೇವತಾಕಾರ್ಯವು ಇನ್ನೂ ಉಳಿದಿರುವುದರಿಂದ ನೀವಿಬ್ಬರೂ ಸಹಗಮನ ಮಾಡಬಾರದು (ಮಾದ್ರಿಯು ಮಾತ್ರ ಸಹಗಮನವನ್ನು ಮಾಡಲಿ) ಎಂದು ಬ್ರಾಹ್ಮಣರ ಅಭಿಪ್ರಾಯವೆಂದು ಋಷಿಗಳು ತಿಳಿಸುತ್ತಾರೆಂದು ರಾಜರು ವ್ಯಾಖ್ಯಾನ ಮಾಡುತ್ತಾರೆ.

೧೨. **ಸಶೇಷತ್ವಾನ್ನಸಂಪ್ರಾಪ್ತೋ ಜಲೇ ಶೂಲಾನಿ ಪಾಂಡವಃ** (ಆದಿ 126-24)

ಗಂಗಾನದಿಯಲ್ಲಿ ಶೂಲಗಳನ್ನು ನೆಟ್ಟು ಭೀಮಸೇನನನ್ನು ಉಕ್ಕಿನ ಹಗ್ಗಗಳಿಂದ ಬಿಗಿದು ದುರ್ಯೋಧನನು ಪ್ರಮಾಣಕೋಟಿ ಮಡುವಿನಲ್ಲಿ ಕೆಡವಿದನು. ಆದರೆ, 'ಸಶೇಷತ್ವಾತ್' ಭೀಮಸೇನನು ಶೂಲಗಳನ್ನು ತಲುಪಲಿಲ್ಲ ಎಂದು ಅರ್ಥ. ಇಲ್ಲಿ ಸಶೇಷತ್ವಾತ್ ಎಂದರೆ ಏನು ಅರ್ಥ, ಶೂಲವನ್ನು ತಲುಪದೆ ಇರುವುದಕ್ಕೆ ಅದು ಹೇಗೆ ಕಾರಣ ಎಂದು ತಿಳಿಯುವುದಿಲ್ಲ. ರಾಜರು ಅರ್ಥವನ್ನು ಸ್ಪಷ್ಟಪಡಿಸುತ್ತಾರೆ. ಪ್ರಮಾಣಕೋಟಿಯು ಬಹಳ ಆಳವಾದ ಮಡು. ದೋಣಿಯಲ್ಲಿ ಕರೆದುಕೊಂಡು ಹೋಗಿ ಭೀಮಸೇನನನ್ನು ಅಲ್ಲಿ ಎತ್ತಿ ಹಾಕಿದರೂ ಭೀಮಸೇನನು ಬಿದ್ದಸ್ಥಳಕ್ಕೂ ಮತ್ತು ಶೂಲಗಳ ತುದಿ ಇದ್ದ ಸ್ಥಳಕ್ಕೂ ಮಧ್ಯೆ ಅಪಾರಜಲರಾಶಿ (ಜಲಶೇಷ) ಇದ್ದುದರಿಂದ ಶೂಲಗಳನ್ನು ತಲುಪುವುದಕ್ಕಿಂತ

ಮುಂಚೆಯೇ ಭೀಮಸೇನನು ಎಚ್ಚರಗೊಂಡು ತನ್ನ ಬಂಧನಗಳನ್ನು ಕಡಿದು ಹಾಕಿ ಮೇಲೆ ಬಂದನು ಎಂದು ಅಭಿಪ್ರಾಯ.

**೧೩. ಹತಂ ಸರ್ಪವಿಷೇಣಾಶು ಸ್ಥಾವರಂ ಜಂಗಮೇನ ತು**

(ಆದಿ 128-28)

ಇದೂ ಮೇಲಿನ ಪ್ರಸಂಗದಲ್ಲಿಯೇ ಬಂದಿರುವ ಇನ್ನೊಂದು ವಚನ. ಜಂಗಮವಾದ ಸರ್ಪವಿಷದಿಂದ ಸ್ಥಾವರವು ಹತವಾಯಿತು ಎಂದು ಅರ್ಥ. ಏನೂ ಸ್ಪಷ್ಟವಾಗುವುದಿಲ್ಲ. ಅದಕ್ಕಾಗಿ ರಾಜರು ಅರ್ಥವನ್ನು ಬಿಡಿಸುತ್ತಾರೆ. ಇದು ಭೀಮಸೇನನಿಗೆ ವಿಷದ ಲಡ್ಡುಗಳನ್ನು ತಿನ್ನಿಸಿ ಅವನನ್ನು ಪ್ರಜ್ಞಾಶೂನ್ಯನನ್ನಾಗಿ ಮಾಡಿ ಇನ್ನೊಮ್ಮೆ ಗಂಗೆಯಲ್ಲಿ ಮುಳುಗಿಸಿದಾಗ ನಡೆದ ಘಟನೆ. ಲಡ್ಡುಗಳ ವಿಷವು ಭೀಮಸೇನನ ಶರೀರದಲ್ಲೆಲ್ಲಾ ವ್ಯಾಪಿಸಿತ್ತು. ಅವನು ಹಾಗೆಯೇ ಗಂಗೆಯ ತಳಕ್ಕೆ ಹೋದಾಗ ನಾಗಲೋಕದ ಸರ್ಪಗಳು ಅವನನ್ನು ಕಚ್ಚಿದವು. ಆದರೆ ಭೀಮಸೇನನು ನಿರ್ವಿಷನಾಗಿ ಎಚ್ಚರಗೊಂಡನು. ಭೀಮಸೇನನ ಶರೀರದಲ್ಲಿದ್ದ ವಿಷ ಸ್ಥಾವರ ವಿಷ. ಸರ್ಪಗಳು ಕಡಿದುದರಿಂದ ಅವನ ದೇಹಕ್ಕೆ ಬಂದ ವಿಷ ಜಂಗಮ ವಿಷ. ಮುಳ್ಳಿನಿಂದ ಮುಳ್ಳನ್ನು ತೆಗೆದಂತೆ ಅವೆರಡು ವಿಷಗಳೂ ಪರಸ್ಪರವಾಗಿ ಪ್ರತಿಕ್ರಿಯಿಸಿ ತಮ್ಮ ವಿಷಶಕ್ತಿಯನ್ನು ಕಳೆದುಕೊಂಡವು. ಆದ್ದರಿಂದ ನಿರ್ವಿಷನಾದ ಭೀಮಸೇನನು ಮೇಲೆದ್ದು ಬಂದ ಎಂದು ಅಭಿಪ್ರಾಯವನ್ನು ತಿಳಿಸಿ ಆದ್ದರಿಂದ ಭೀಮಸೇನನಿಗೆ ದುರ್ಜರವಾದ ವಿಷವನ್ನು ಜೀರ್ಣಿಸಿಕೊಳ್ಳುವುದು ಮತ್ತು ನಿರ್ಜರರ ಅಧಿಪತಿಯಾಗಿರುವುದು ಏನು ಆಶ್ಚರ್ಯವೆಂದು ರಾಜರು ಭೀಮಸೇನನ ಚರ್ಯೆಗೆ ತಮ್ಮ ಮೆಚ್ಚುಗೆಯನ್ನು ಸೂಚಿಸುತ್ತಾರೆ.

**೧೪. ಓಷಧೀಭಿರ್ವನಕ್ಷ್ನೀಭಿಃ ಸುರಭೀಭಿರ್ವಿಭೂಷಿತಃ** । (ಆದಿ 126-57)

**ಇದೂ ಮೇಲಿನ ಸಂದರ್ಭದಲ್ಲಿಯೇ** ಬಂದಿರುವ ವಚನ. ಭೀಮಸೇನನು **ನಾಗಲೋಕದಲ್ಲಿ ಸುಗಂಧಯುಕ್ತವಾದ** ಓಷಧಿಗಳಿಂದ ಅಲಂಕರಿಸಲ್ಪಟ್ಟನು ಎಂದು **ಅರ್ಥ. ಆದರೆ, ಇಲ್ಲಿ ಓಷಧೀಭಿಃ** ಎಂಬ ಶಬ್ದಕ್ಕೆ ವನಕ್ಷ್ನೀಭಿಃ ಎಂದು ವಿಶೇಷಣವಿದೆ. ವನಕ್ಷ್ನೀಭಿಃ ಎಂಬ ಶಬ್ದಕ್ಕೆ ವನವನ್ನು ನಾಶಮಾಡುವ ಎಂಬ ಅರ್ಥವು ಸಹಜವಾಗಿ ತೋರುತ್ತದೆ. ಆದರೆ ಅದು ಇಲ್ಲಿ ಸಂಗತವಾಗುವುದಿಲ್ಲ. ಆದ್ದರಿಂದ ರಾಜರು ಅರ್ಥವನ್ನು ಬಿಡಿಸುತ್ತಾರೆ. ವನಕ್ಷ್ನೀಭಿಃ ಎಂಬಲ್ಲಿರುವ ಘ್ನೀ ಎಂಬ ಭಾಗವು 'ಹನ ಹಿಂಸಾಗತ್ಯೋಃ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಹನ ಎಂದರೆ ಕೊಲ್ಲು, ನಾಶಮಾಡು ಎಂಬ ಅರ್ಥವಿದೆ. ಅದನ್ನು ತೆಗೆದುಕೊಂಡು ನಮಗೆ ಸಂಶಯವು ಬರುತ್ತದೆ. ಅದಕ್ಕಾಗಿ ರಾಜರು ಹನ ಧಾತುವಿಗೆ ಇರುವ ಗತ್ಯರ್ಥವನ್ನು ವ್ಯಾಖ್ಯಿಸುತ್ತಾರೆ. ವನಕ್ಷ್ನೀಭಿಃ ಎಂದರೆ ವನದಲ್ಲಿರುವ

(ಓಷಧಿಗಳಿಂದ) ಎಂದು ಅರ್ಥ. ಈ ಅರ್ಥದಲ್ಲಿ ಯಾವ ಅನುಪಪತ್ತಿಯೂ ಇಲ್ಲ. ಹೀಗೆ ಶಬ್ದದ ಮೂಲರೂಪಕ್ಕೆ ಹೋಗಿ ಸಹಜವಾದ ಅರ್ಥವನ್ನು ಹೇಳುವುದು ರಾಜರ ಪದ್ಧತಿ. ಇದನ್ನು ತಾವು ಶ್ರೀಮದಾಚಾರ್ಯರಿಂದ ಕಲಿತೆವೆಂದು ಅವರು ವಿನಯದಿಂದ ಹೇಳಿಕೊಳ್ಳುತ್ತಾರೆ.

**೧೫. ತದೃಷಿದ್ರೋಣ ಆದಧತ್** (ಆದಿ 128-5)

ಇದು ದ್ರೋಣರ ಉತ್ಪತ್ತಿಯ ಸಮಯದಲ್ಲಿ ಬಂದ ಒಂದು ವಚನ. ಭರದ್ವಾಜರು ಘೃತಾಚಿಯನ್ನು ನೋಡಿ ರೇತಃಸ್ಖಲನವನ್ನು ಹೊಂದಿ ಆ ರೇತಸ್ಸನ್ನು ಒಂದು ದೊನ್ನೆಯಲ್ಲಿ ಹಿಡಿದರು ಎಂದು ಎಲ್ಲರೂ ಅರ್ಥವನ್ನು ಹೇಳುತ್ತಾರೆ. ಆದರೆ ರಾಜರು ಇಲ್ಲಿ ದ್ರೋಣಶಬ್ದಕ್ಕೆ ದೊನ್ನೆ ಎಂದು ಅರ್ಥವಲ್ಲ. ಅದೊಂದು ಪರಿಮಾಣ (ಅಳತೆ) ವಾಚಕಶಬ್ದ. ದ್ರೋಣೋ ವ್ರೀಹಿಃ ಮುಂತಾದ ಪ್ರಯೋಗಗಳು ಪ್ರಸಿದ್ಧವಾಗಿವೆ. ಆದ್ದರಿಂದ ದ್ರೋಣ ಪರಿಮಾಣದ ತಮ್ಮ ಕಲಶದಲ್ಲಿ ಆ ವೀರ್ಯವನ್ನು ಹಿಡಿದರು ಎಂದು ಅರ್ಥ ಎಂದು ಹೊಸದೊಂದು ಪ್ರಮೇಯವನ್ನು ರಾಜರು ತಿಳಿಸಿದ್ದಾರೆ.

**೧೬. ಭುಕ್ತವಾನೇವ ಕೌಂತೇಯಃ** (131-4)

ಒಮ್ಮೆ ದ್ರೋಣರ ಪತ್ನಿಯು ರಾತ್ರಿ ಅರ್ಜುನನಿಗೆ ಊಟವನ್ನು ಬಡಿಸುತ್ತಿದ್ದಾಗ ದೀಪವು ನಂದಿಹೋಯಿತು. ತನ್ನ ಹಸ್ತದ ಪ್ರಕಾಶದಿಂದ ಅರ್ಜುನನು ಭೋಜನವನ್ನು ಮುಂದುವರಿಸಿದನು ಎಂದು ಮೂಲಶ್ಲೋಕದಿಂದ ತಿಳಿದುಬರುತ್ತದೆ. ಬೆಳಕಿಲ್ಲದಿದ್ದರೂ ಹಸ್ತವು ತಪ್ಪದೇ ಬಾಯಿಗೇ ತುತ್ತನ್ನು ಇಡುವಂತೆ ಅಭ್ಯಾಸದಿಂದ ಬೆಳಕಿಲ್ಲದಿದ್ದರೂ ಬಾಣಪ್ರಯೋಗವನ್ನು ಮಾಡಬಹುದೆಂದು ತಿಳಿದು ಅರ್ಜುನನು ರಾತ್ರಿಕಾಲದಲ್ಲಿಯೂ ಧನುರ್ವಿದ್ಯೆಯನ್ನು ಅಭ್ಯಾಸಮಾಡಿದ ಎಂಬುದು ಒಂದು ಪ್ರಮೇಯ. ರಾಜರು ಇನ್ನೊಂದು ರಹಸ್ಯವನ್ನು ಇಲ್ಲಿ ತಿಳಿಸುತ್ತಾರೆ. ಅರ್ಜುನನು ಸತತವಾಗಿ ಬಾಣಪ್ರಯೋಗವನ್ನು ಮಾಡುವುದರಿಂದ ಅವನ ಹಸ್ತವೇ ಹೊಳೆಯುತ್ತಿತ್ತು. ಆದ್ದರಿಂದಲೇ ದೀಪವಿಲ್ಲದೆ ಊಟಮಾಡಬಾರದೆಂಬ ನಿಯಮವನ್ನು ತಿಳಿದಿದ್ದರೂ ಸಹ ಅರ್ಜುನನು ತನ್ನ ಹಸ್ತದ ಪ್ರಕಾಶವೇ ಇರುವುದರಿಂದ ಭೋಜನವನ್ನು ಮುಂದುವರೆಸಿದನು. ಇದನ್ನು ಗಮನಿಸಿದ ದ್ರೋಣರು ತಮ್ಮ ಪತ್ನಿಗೆ ಇನ್ನು ಮುಂದೆ ಎಂದೂ ಅರ್ಜುನನಿಗೆ ಕತ್ತಲಿನಲ್ಲಿ ಬಡಿಸಬಾರದು ಎಂದು ಅಪ್ಪಣೆ ಮಾಡಿದರು. ಏಕೆಂದರೆ ಕತ್ತಲಿನಲ್ಲಿ ಯಾರಾದರೂ ಅರ್ಜುನನ ಕೈಯನ್ನು ಗಮನಿಸಿದರೆ ಅದರ ಪ್ರಕಾಶವನ್ನು ನೋಡಿ ಅರ್ಜುನನಿಗೆ ದೃಷ್ಟಿದೋಷವು ತಗುಲಬಹುದು. ಹಾಗಾಗದಿರಲಿ ಎಂಬ ಅಭಿಪ್ರಾಯದಿಂದ ದ್ರೋಣರು ಹೀಗೆ ಅಪ್ಪಣೆ ಮಾಡಿದರೆಂದು ರಾಜರು ತಿಳಿಸುತ್ತಾರೆ.

೧೭. ಸೌತ್ರಾಮಣೀಂ ತು ತಾಂ ಪತ್ನೀಂ ತತಃ ಕಾಲೇಽಭ್ಯಧಾತ್ ತದಾ

(ಆದಿ 138-48)

ಯಾಜೋಪಯಾಜರು ದ್ರುಪದನ ಸಲುವಾಗಿ ಯಾಗವನ್ನು ಮಾಡಿ ಯಾಗಾವಸಾನದಲ್ಲಿ ಪತ್ನಿಗೆ ಹವಿರ್ಭಾಗವನ್ನು ಕೊಡಲು ದ್ರುಪದನ ಪತ್ನಿಯನ್ನು ಆಹ್ವಾನಿಸಿದರು. ಅವಳು ಸರ್ವಾಲಂಕಾರ ಭೂಷಿತಳಾಗಿದ್ದಳೆಂದು ತಿಳಿಸಬೇಕಾಗಿದೆ. ಅದಕ್ಕೆ ವ್ಯಾಸರು ಅಪ್ರಸಿದ್ಧವಾದ ಸೌತ್ರಾಮಣಿ ಎಂಬ ಶಬ್ದವನ್ನು ಬಳಸಿದ್ದಾರೆ. ಸೂತ್ರಗಳಿಂದ ಪೋಣಿಸಿದ, ಮಣಿಗಳಿಂದ ಅಲಂಕೃತಳಾದವಳು ಎಂಬ ಅರ್ಥವೇನೋ ಆ ಶಬ್ದದಿಂದ ಬರುತ್ತದೆ. ಆದರೆ, ವ್ಯಾಸರು ಏಕೆ ಇಂತಹ ಅಪ್ರಸಿದ್ಧವಾದ ಶಬ್ದವನ್ನು ಪ್ರಯೋಗಿಸಿದ್ದಾರೆ ಎಂದು ತಿಳಿಯುವುದಿಲ್ಲ. ಅದನ್ನು ರಾಜರು ಸ್ಪಷ್ಟಪಡಿಸುತ್ತಾರೆ. ಅವಳನ್ನು ಆಹ್ವಾನ ಮಾಡಿದಾಗ ಅವಳು 'ನಾನು ಇನ್ನೂ ಮುಖಕ್ಕೆ ಲೇಪನವನ್ನು ಮಾಡಿಕೊಂಡಿಲ್ಲ, ಸುಗಂಧಗಳನ್ನು ಪೂಸಿಕೊಂಡಿಲ್ಲ, ಮಕ್ಕಳು ಸಿದ್ಧವಾಗಿದ್ದಾರೆ ಬಾ ಎಂದು ಕರೆಯುವುದಕ್ಕೆ ನಾನು ನಿನ್ನ ಪತ್ನಿಯಲ್ಲ. ನಾನು ಬರುವವರೆಗೂ ತಡೆ' ಎಂದು ಅಹಂಕಾರದ ಮಾತುಗಳನ್ನು ಆಡುತ್ತಾಳೆ. ಯದ್ಯಪಿ ಅವಳು ಸ್ವಾಭಾವಿಕವಾಗಿ ವಿನಯದಿಂದ ನಡೆದುಕೊಳ್ಳುವವಳು. ಇಂತಹ ಮಾತುಗಳನ್ನು ಆಡುವವಳಲ್ಲ. ಆದರೂ ಈಗ ಆಡಿದ್ದಾಳೆ. ಅದಕ್ಕೆ ಕಾರಣ ಅವಳು ಮಾಡಿರುವ ಮದ್ಯಪಾನ. ಕ್ಷತ್ರಿಯರಿಗೆ ವಿಹಿತವೂ ಆಗಿದೆ. ಆದ್ದರಿಂದ ಅವಳ ಈ ಅಹಂಕಾರದ ಮಾತುಗಳಿಗೆ ಅವಳು ಮಾಡಿರುವ ಮದ್ಯಪಾನವು ಕಾರಣವೆಂದು ಸೂಚಿಸಲು ವ್ಯಾಸರು ಇಂತಹ ಅಪ್ರಸಿದ್ಧವಾದ ಶಬ್ದವನ್ನು ಪ್ರಯೋಗಿಸಿದ್ದಾರೆಂದು ರಾಜರು ತಿಳಿಸುತ್ತಾರೆ.

೧೮. ಭಾರದ್ವಾಜ ಮಮಾಚಕ್ಷ್ವ (ಆದಿ 142-3).

ಇದು ದುರ್ಯೋಧನ (ಅಥವಾ ಧೃತರಾಷ್ಟ್ರನು) ಕಣಿಂಕನನ್ನು ಕುರಿತು ಹೇಳುವ ಮಾತು. ಇಲ್ಲಿ ಭಾರದ್ವಾಜ ಎಂದು ಋಷಿಗಳ ಹೆಸರಿದೆ. ಕಣಿಂಕನಾದರೂ ದುರ್ನೀತಿಯನ್ನು ಭೋಧಿಸುವವನು. ಇವೆರಡನ್ನೂ ಕೂಡಿಸಲು ಸಾಧ್ಯವಿಲ್ಲ ಎಂದು ಬಹಳ ಜನರು 'ಕಣಿಂಕ ತ್ವಂ ಮಮಾಚಕ್ಷ್ವ' ಎಂದು ಪಾಠವನ್ನೇ ತಿದ್ದಿದ್ದಾರೆ. ರಾಜರು ಮಾತ್ರ ಕಣಿಂಕನು ಭಾರದ್ವಾಜಗೋತ್ರದಲ್ಲಿ ಜನಿಸಿದ ಒಬ್ಬ ದುಷ್ಟಬ್ರಾಹ್ಮಣ. ಆದ್ದರಿಂದ ಅವನನ್ನು ಭಾರದ್ವಾಜ ಎಂದು ಸಂಬೋಧಿಸುವುದು ಉಪಪನ್ನವಾಗುತ್ತದೆ ಎಂದು ಸಮರ್ಥಿಸಿದ್ದಾರೆ.

೧೯. ಕ್ಷತ್ತಾ ಆರ್ತಬಂಧುರಸ್ಮಾಕಂ ಪ್ರಚ್ಛನ್ನಸ್ತು ಯತಃ ಪರೇ

(ಆದಿ 143-20).

ಇದು ದುರ್ಯೋಧನನು ಧೃತರಾಷ್ಟ್ರನ ಬಳಿ ವಿದುರನ ಬಗ್ಗೆ ಹೇಳುವ ಮಾತು. ವಿದುರನು ನಮಗೆ ಆರ್ತಬಂಧುವಾಗಿದ್ದಾನೆ. ಧರ್ಮರಾಜಾದಿಗಳಿಗೆ ಪ್ರಚ್ಛನ್ನ ಬಂಧುವಾಗಿದ್ದಾನೆ ಎಂದು ಅರ್ಥ. ಆರ್ತಬಂಧು ಮತ್ತು ಪ್ರಚ್ಛನ್ನ ಬಂಧು ಎಂಬ ಶಬ್ದಗಳಿಗೆ ಅರ್ಥವು ತಿಳಿಯುವುದಿಲ್ಲ. ಅದನ್ನು ರಾಜರು ಬಿಡಿಸುತ್ತಾರೆ. ನಮಗೆ ಅವನು ಆರ್ತಬಂಧು ಎಂದರೆ ಮನಸ್ಸಿನಲ್ಲಿ ನಮ್ಮ ಬಗ್ಗೆ ಕ್ಲೇಶವಿರುವ ಬಂಧು ಎಂದು ಅರ್ಥ. ಬಂಧುವೇನೋ ಸರಿ ಆದರೆ ಆ ಬಾಂಧವ್ಯದ ಬಗ್ಗೆ ವಿದುರನಿಗೆ ಕ್ಲೇಶವಿದೆ ಸಂತೋಷವಿಲ್ಲ ಎಂದು ಅರ್ಥ. ಧರ್ಮರಾಜಾದಿಗಳಿಗೆ ಪ್ರಚ್ಛನ್ನ ಬಂಧು ಎಂದರೆ ಅವನ ಪ್ರೀತಿ ವಿಶ್ವಾಸಗಳು ಧರ್ಮರಾಜಾದಿಗಳಲ್ಲಿವೆ. ಅದನ್ನು ತೋರಗೊಡದೆ ನಮ್ಮ ಜೊತೆಯಲ್ಲಿ ಇದ್ದಾನೆ ಎಂದು ಅರ್ಥಮಾಡಬೇಕೆಂದು ರಾಜರು ತಿಳಿಸುತ್ತಾರೆ.

೨೦. ಪ್ರಾಜ್ಞಃ ಪ್ರಾಜ್ಞಪ್ರಲಾಪಜ್ಞಃ ಸಮ್ಯಗ್ ಧರ್ಮಾರ್ಥದರ್ಶಿವಾನ್।
ವಿಜ್ಞಾಯೇದಂ ತಥಾ ಕುರ್ಯಾತ್ ಆಪದಂ ನಿಸ್ತರೇದ್ ಯಥಾ ॥

ಅಲೋಹಂ ನಿಶಿತಂ ಶಸ್ತ್ರಂ ಶರೀರಪರಿಕರ್ತನಮ್।
ಯೋ ವಿದಂತಿ ನ ತಾನ್ ಘ್ನಂತಿ ಪ್ರತಿಘಾತವಿದಸ್ತಥಾ॥

ಕಕ್ಷಘ್ನಂ ಶಿಶಿರಘ್ನಂ ಚ ಮಹಾಕುಕ್ಷೌಬಿಲೌಕಸಮ್ ।
ನ ದಹೇತೀತಿ ಚಾತ್ಮಾನಂ ಯೋ ರಕ್ಷತಿ ಸ ಜೀವತಿ ॥

ನಾಚಕ್ಷುರ್ವೇತ್ತಿ ಪಂಥಾನಂ ನಾಚಕ್ಷುರ್ವೇತ್ತಿ ವೈ ದಿಶಃ ।
ನಾಧೃತಿರ್ಭೂತಿಮಾಪ್ನೋತಿ ಬುಧ್ಯಸ್ವೈನಂ ಪ್ರಬೋಧಿತಃ ॥

ನಾನಾಪ್ತೈರ್ದತ್ತಮಾದತ್ತೇ ಧೀರಃ ಶಸ್ತ್ರಮಲೋಹಜಮ್ ।
ಶ್ವಾವಿಟ್ ಶರಣಮಾಸಾದ್ಯ ಪ್ರಮುಚ್ಯೇತ ಹುತಾಶನಾತ್ ॥

ಚರಂ ಮಾರ್ಗಾನ್ ವಿಜಾನಾತಿ ನಕ್ಷತ್ರೈರ್ವಿಂದತೇ ದಿಶಃ ।
ಆತ್ಮನಾ ಚಾತ್ಮನಃ ಪಂಚ ಪೀಡಯನ್ ನ ಸ ಪೀಡ್ಯತೇ॥

(ಆದಿ ೧೪೫; ೨೦-೨೫)

ಇವು ಧರ್ಮರಾಜಾದಿಗಳು ಹಸ್ತಿನಾಪುರಿಯಿಂದ ವಾರಣಾವತಕ್ಕೆ ಹೋಗುವ ಸಂದರ್ಭದಲ್ಲಿ ವಿದುರನು ಧರ್ಮರಾಜನನ್ನು ಕುರಿತು ಎಚ್ಚರಿಕೆಯಿಂದಿರಬೇಕೆಂದು ಹೇಳಿದ ಒಗಟಿನ ಮಾತುಗಳು. ಇವುಗಳ ಅಭಿಪ್ರಾಯವನ್ನು ರಾಜರು ಹೀಗೆ ಬಿಡಿಸುತ್ತಾರೆ.

ಪ್ರಾಜ್ಞಃ = ಸ್ವಯಂ ಕುಶಲನಾಗಿದ್ದು, ಪ್ರಾಜ್ಞಪ್ರಲಾಪಜ್ಞಃ = ಇನ್ನೊಬ್ಬ ಪ್ರಾಜ್ಞನು ಸ್ಪಷ್ಟವಾಗಿ ಹೇಳದೇ ಸಂಜ್ಞೆಯ ಮೂಲಕವಾಗಿ ತಿಳಿಸಿದ ಮಾತುಗಳ ಅರ್ಥವನ್ನು ತಿಳಿದುಕೊಳ್ಳುವವನು. ಇದಂ ವಿಜ್ಞಾಯ = ನಾನು ಇನ್ನು ಹೇಳುವ ವಚನಗಳ ಅರ್ಥವನ್ನು ತಿಳಿದವನಾಗಿ, ಯಥಾ ನಿಸ್ತರೇತ್ = ಹೇಗೆ ದಾಟುತ್ತಾನೆಯೋ, ತಥಾ ಕುರ್ಯಾತ್ = ಹಾಗೆಯೇ ಮಾಡಬೇಕು ಎಂದು. ಇದು ಧರ್ಮರಾಜನಿಗೇ ನೀತಿಕಥನನೆಪದಿಂದ ಹೇಳುವ ಬುದ್ಧಿಯ ಮಾತು. ಅಲೋಹಂ = ಲೋಹಮಯವಲ್ಲದ, ಶರೀರಪರಿಕ್ರಂತನಂ = ಸಮಗ್ರವಾದ ಶರೀರವನ್ನು ಕತ್ತರಿಸಿ ನಾಶಮಾಡುವ, ನಿಶಿತಂ = ಹರಿತವಾದ, ಶಸ್ತ್ರಂ = ಆಯುಧವನ್ನು, ಯೇ = ಯಾರು, ವಿದಂತಿ = ತಿಳಿಯುತ್ತಾರೆಯೋ, ತಾನ್ = ಅವರನ್ನು, ಪ್ರತಿಘಾತವಿದಃ = ಕಪಟತಂತ್ರಗಳಿಂದ ತಮ್ಮ ಶತ್ರುಗಳನ್ನು ಕೊಲ್ಲಲು ಬಯಸುವವರು, ನಘ್ನಂತಿ = ಕೊಲ್ಲಲಾರರು. ಇದು ಕಪಟಗೃಹದ ವಿಷಯದಲ್ಲಿ ಎಚ್ಚರಿಕೆಯಿಂದಿರಬೇಕೆಂದು ಸೂಚನೆ.

ಕಕ್ಷಘ್ನಂ = ಕಾಡನ್ನು ನಾಶಮಾಡುವ, ಶಿಶಿರಘ್ನಂ = ಹಿಮವನ್ನು ನಾಶಮಾಡುವ, ಮಹಾಕುಕ್ಷಿಬಲೌಜಸಮ್ = ದೊಡ್ಡ ಉದರಕ್ಕೆ ಬಲವನ್ನೂ, ಸಾಮರ್ಥ್ಯವನ್ನೂ ಕೊಡುವ ವಸ್ತುವನ್ನು, ನ ಸಹೇತ = ಮನುಷ್ಯ ದೇಹವು ಸಹಿಸಲಾರದು, ಇತಿ = ಎಂದು ತಿಳಿದು, ಯಃ = ಯಾವನು, ಆತ್ಮಾನಂ = ತನ್ನನ್ನು, ರಕ್ಷತಿ = ರಕ್ಷಿಸಿಕೊಳ್ಳುತ್ತಾನೆಯೋ, ಸ = ಅವನು, ಜೀವತಿ = ಬದುಕುತ್ತಾನೆ. ವನನಾಶಕವಾದ, ಹಿಮನಾಶಕವಾದ ಜಠರಕ್ಕೆ ಬಲವನ್ನು ಕೊಡುವ ವಸ್ತುವೆಂದರೆ ಅಗ್ನಿ. ಅದನ್ನು ಮನುಷ್ಯದೇಹವು ಸಹಿಸಲಾರದು. ಆದ್ದರಿಂದ ಅಗ್ನಿಯ ಅಪಘಾತದಿಂದ ನಿಮ್ಮನ್ನು ನೀವು ರಕ್ಷಿಸಿಕೊಳ್ಳಬೇಕೆಂದು ಎಲ್ಲರಿಗೂ ಸೂಚನೆ.

ಅಚಕ್ಷುಃ = ಕಣ್ಣಿಲ್ಲದವನು, ಪಂಥಾನಂ = ಮಾರ್ಗವನ್ನು, ನ ವೇತ್ತಿ = ತಿಳಿಯುವುದಿಲ್ಲ. ಅಚಕ್ಷುಃ = ಕಣ್ಣಿಲ್ಲದವನು, ದಿಶಃ = ದಿಕ್ಕುಗಳನ್ನೂ, ನ ವೇತ್ತಿ = ತಿಳಿಯುವುದಿಲ್ಲ. ಅಧೃತಿಃ = ಧೈರ್ಯವಿಲ್ಲದವನೂ, ಭೂತಿಂ = ಆಶ್ಚರ್ಯವನ್ನು, ನ ಆಪ್ನೋತಿ = ಹೊಂದುವುದಿಲ್ಲ. ಆದ್ದರಿಂದ ಮಾರ್ಗಗಳನ್ನೂ, ದಿಕ್ಕುಗಳನ್ನೂ ತಿಳಿದು ಧೈರ್ಯಗೆಡದೆ ಅಪಾಯದಿಂದ ಪಾರಾಗಬೇಕೆಂದು ಇದು ಭೀಮಸೇನನಿಗೆ ಸೂಚನೆ.

ಧೀರಃ = ಧೀರನಾದವನು, ಅನಾಪ್ತೈಃ = ದತ್ತರು, ವಿಶ್ವಾಸಪಾತ್ರರಲ್ಲದವರು ನೀಡಿದ, ಅಲೋಹಜಮ್ = ಲೋಹಮಯವಲ್ಲದ, ಶಸ್ತ್ರಂ = ನಾಶಕವಾದ ವಸ್ತುವನ್ನು, ನ ಆದತ್ತೇ = ಸ್ವೀಕರಿಸುವುದಿಲ್ಲ. ಈ ಮಾತುಗಳಿಂದ ಶತ್ರುಗಳು ಕೊಟ್ಟ ಅನ್ನಪಾನಾದಿಗಳನ್ನು ಭುಂಜಿಸಬಾರದು. ಅದು ಲೋಹಮಯವಲ್ಲದ ಜೀವಿತಾಂತಕರವಾದ ಶಸ್ತ್ರ ಎಂದು

ಪಾಂಡವರಿಗೆ ವಿದುರನು ಎಚ್ಚರಿಕೆಯನ್ನು ನೀಡುತ್ತಿದ್ದಾನೆ. ಶ್ವಾವಿಟ್‌ಶರಣಮಾಸಾದ್ಯ = ಮುಳ್ಳುಹಂದಿಯ ಬಿಲವನ್ನು ಸೇರಿದರೆ, ಹುತಾಶನಾತ್ = ಅಗ್ನಿಯಿಂದ, ವಿಮುಚ್ಯೇತ = ವಿಮುಕ್ತನಾಗುತ್ತಾನೆ. ಹೀಗೆ ಹೇಳಿ ವಿದುರನು ಬಿಲವಾಸ ಮತ್ತು ಬಿಲಮಾರ್ಗವಾಗಿ ಗಮನವನ್ನು ಸೂಚಿಸುತ್ತಿದ್ದಾರೆ.

ಚರನ್ = ಸಂಚರಿಸುವವನು, ಮಾರ್ಗಂ = ದಾರಿಗಳನ್ನು, ವಿನಾಜಾತಿ = ತಿಳಿಯುತ್ತಾನೆ. ನಕ್ಷತ್ರೈಃ = ನಕ್ಷತ್ರಗಳಿಂದ, ದಿಶಃ = ದಿಕ್ಕುಗಳನ್ನು ತಿಳಿಯುತ್ತಾನೆ. ಆತ್ಮನಾ = ಬುದ್ಧಿಯಿಂದ, ಆತ್ಮನಃ = ತನ್ನ ಪ್ರತಿನಿಧಿಗಳಾದ ಪುರೋಚನನ ತಂಗಿಯ ಐದು ಮಕ್ಕಳನ್ನು, ಪೀಡಯನ್ ಸಃ = ಹಿಂಸಿಸುವವನು, ನ ಪೀಡ್ಯತೇ = ತಾನು ಹಿಂಸೆಗೆ ಒಳಗಾಗುವುದಿಲ್ಲ. ಈ ಮಾತುಗಳಿಂದ ಹಗಲೂ, ರಾತ್ರಿಯೂ ಸಂಚರಿಸಿ ಮಾರ್ಗಗಳನ್ನು ತಿಳಿದುಕೊಂಡು ಪುರೋಚನ, ಅವನ ತಂಗಿ ಮತ್ತು ಅವಳ ಐದು ಮಕ್ಕಳನ್ನೂ ಸಂಹರಿಸಿ ಬಿಲಮಾರ್ಗದಿಂದ ನೀವೆಲ್ಲರೂ ತಪ್ಪಿಸಿಕೊಂಡು ಹೋಗಬೇಕೆಂದು ವಿದುರನು ಸೂಚಿಸುತ್ತಿದ್ದಾನೆ ಎಂದು ರಾಜರ ಅಭಿಪ್ರಾಯ.

ಹೀಗೆ ಲಕ್ಷಾಲಂಕಾರದ ಬೆಳಕಿನಲ್ಲಿ ಮಹಾಭಾರತದ ಅರ್ಥವನ್ನು ತಿಳಿಯುವುದು ಅತ್ಯವಶ್ಯಕವಾದ್ದರಿಂದ ನಾವು ಈ ಪ್ರಯತ್ನವನ್ನು ಮಾಡಿದ್ದೇವೆ. ಈ ನಮ್ಮ ಪ್ರಯತ್ನವು ನೂರಕ್ಕೆ ನೂರರಷ್ಟು ಯಶಸ್ವಿಯಾಗಿದೆ ಎಂದು ನಾವು ಎಂದೂ ಹೇಳಲಾರೆವು. ಇನ್ನೂ ಬಗೆ ಹರಿಸಲಾರದ ಸಮಸ್ಯೆಗಳಿರುವ ಅನೇಕ ಸ್ಥಳಗಳಿವೆ. ಆದರೂ ಇದುವರೆಗೆ ಮುದ್ರಿತವಾದ ಮಹಾಭಾರತದ ಆವೃತ್ತಿಗಳಿಗಿಂತಲೂ ಇದು ಹೆಚ್ಚು ಶುದ್ಧವಾಗಿದೆ ಎಂಬುದಿಷ್ಟೇ ನಮಗೆ ಸಮಾಧಾನಕರವಾದ ವಿಷಯ.

ನಮ್ಮ ಈ ಗ್ರಂಥಗಳಲ್ಲಿ ತಪ್ಪುಗಳನ್ನು ತೋರಿಸಿ ತಿದ್ದಿಕೊಳ್ಳಲು ಸಹಾಯ ಮಾಡುವ ವಿದ್ವಾಂಸರಿಗೆ ನಾವು ಎಂದೂ ಕೃತಜ್ಞರಾಗಿರುತ್ತೇವೆ.

ಮತ್ತು ಈ ನಮ್ಮ ಪ್ರಯತ್ನವು ಹರಿವಾಯುಗುರುಗಳ ಮನಸ್ಸಿಗೆ ಬಂದು ಅವರು ನಮಗೆ ಶ್ರೇಯಸ್ಸನ್ನು ಉಂಟುಮಾಡಲಿ ಎಂದೂ ಪ್ರಾರ್ಥಿಸುತ್ತೇನೆ.

– ಶ್ರೀಪಾದ ಚರಣ ಸೇವಕ
ಪಿ.ಎಸ್. ಶೇಷಗಿರಿ ಆಚಾರ್ಯ

—0—

# ಆದಿಪರ್ವವನ್ನು ಕುರಿತು...

ಆದಿಪರ್ವದಲ್ಲಿ ೨೧೮ ಅಧ್ಯಾಯಗಳಿವೆಯೆಂದು ಆದಿಪರ್ವದಲ್ಲಿಯೇ ಪರ್ವಸಂಗ್ರಹ ಪರ್ವದಲ್ಲಿ ಹೇಳಲಾಗಿದೆ. ಆದರೆ ನಾವು ಸಂಪಾದನೆ ಮಾಡಿದಂತೆ ೨೩೭ ಅಧ್ಯಾಯಗಳಾಗಿವೆ. ಲಕ್ಷಾಲಂಕಾರದಲ್ಲಿ ೨೦೦ ಅಧ್ಯಾಯಗಳವರೆಗೆ ವ್ಯಾಖ್ಯಾನವಿದೆ. ಅದರ ನಂತರ 'ಸಮಾಪ್ತಮಾದಿಪರ್ವ' ಎಂದೂ ಇದೆ. ಲಕ್ಷಾಲಂಕಾರದಲ್ಲಿ ೨೦೦ನೆಯ ಅಧ್ಯಾಯವೆಂದು ಹಿಡಿದಿರುವ ಪ್ರತೀಕಗಳು ನಮ್ಮ ಪುಸ್ತಕದಲ್ಲಿ ೨೩೭ನೆಯ ಅಧ್ಯಾಯದಲ್ಲಿ ದೊರೆಯುತ್ತವೆ. ಇದುವರೆಗೆ ಲಕ್ಷಾಲಂಕಾರಕ್ಕೂ ಮತ್ತು ತಾಳೆಗರಿಗಳಿಗೂ ಅಧ್ಯಾಯಗಳ ಸಮಾಪ್ತಿ ಸರಿಹೊಂದುವುದಿಲ್ಲ. ಆದರೆ ತಾಳೆಗರಿಗಳಲ್ಲಿ ಅಧ್ಯಾಯ ಸಮಾಪ್ತಿಗಳು ಪ್ರಾಯಃ ಪರಸ್ಪರ ಸಂವಾದಿಗಳಾಗಿವೆ. ಅಧ್ಯಾಯದ ವಿರಾಮದಲ್ಲಿ ಬೇರೆ ಕ್ರಮವನ್ನು ಅನುಸರಿಸುವುದರಿಂದ ಎಲ್ಲ ಶ್ಲೋಕಗಳೂ ದೊರಕಿದರೂ ಅಧ್ಯಾಯ ಸಂಖ್ಯೆಯಲ್ಲಿ ಮಾತ್ರ ಈ ವ್ಯತ್ಯಾಸವಿದೆ ಎಂದು ತಿಳಿಯ ಬೇಕಾಗುತ್ತದೆ. ''ಪುರುವಂಶಕಥನವಿರುವ ೬೩ನೆಯ ಅಧ್ಯಾಯವೇ ಪುನಃ ೮೩ನೆಯ ಅಧ್ಯಾಯವಾಗಿ ಎಲ್ಲಾ ತಾಳೆಗರಿಗಳಲ್ಲಿ ಬರೆಯಲ್ಪಟ್ಟಿದೆ. ಲಕ್ಷಾಲಂಕಾರದಲ್ಲಿಯೂ ಸಹ ಎರಡು ಸ್ಥಾನದಲ್ಲಿಯೂ ಅದೇ ಪ್ರತೀಕಗಳನ್ನೂ ಅದೇ ವ್ಯಾಖ್ಯಾನಗಳನ್ನೂ ಬರೆಯಲಾಗಿದೆ. ಆದ್ದರಿಂದ ನಾವೂ ಸಹ ಆ ಅಧ್ಯಾಯವನ್ನು ಎರಡು ಬಾರಿ ಹಾಕಿದ್ದೇವೆ.''

ಆದಿಪರ್ವದಲ್ಲಿ ಬರುವ ಒಂದೊಂದು ಆಖ್ಯಾನಗಳೂ ಎರಡು, ಮೂರು ಅಥವಾ ನಾಲ್ಕುಬಾರಿ ಪುನರುಕ್ತವಾಗಿದೆ. ಸಂಶೋಧನೆ ಮಾಡುವವರಿಗೆ ಇದೇನು ಲೇಖಕ ಪ್ರಮಾದದಿಂದ ಉಂಟಾಗಿದೆಯೋ ಅಥವಾ ಮೂಲಗ್ರಂಥದಲ್ಲಿಯೇ ಹಾಗೆಯೇ ಇದೆಯೋ ಎಂದು ಸಂಶಯವು ಮೂಡುವುದು. ಆದರೆ ಲಕ್ಷಾಲಂಕಾರದಲ್ಲಿ ಅವತಾರಿಕೆಗಳನ್ನು ಕೊಡುತ್ತಾ ಇಂತಹ ಆಖ್ಯಾನವನ್ನು, ಅದರ ಮಹತ್ತ್ವ ಪ್ರಯುಕ್ತವಾಗಿ ಅಥವಾ ಸಿಂಹಾವಲೋಕನ ನ್ಯಾಯದಿಂದ ಪುನಃ ಹೇಳುತ್ತಿದ್ದಾರೆ ಎಂದು ಹೇಳಿರುವುದರಿಂದ ಈ ಸಂಶಯವು ನಿವಾರಣೆಯಾಗುತ್ತದೆ.

ಪರಾಶರರು ಮತ್ತು ಸತ್ಯವತಿಯ ವಿವಾಹದ ಬಗ್ಗೆ ಸಾಕಷ್ಟು ವಿವಾದವಿದೆ. ಕೆಲವು ವಿಮರ್ಶಕರು ವಿವಾಹವೇ ನಡೆಯಲಿಲ್ಲ. ಈ ಭಾಗವೆಲ್ಲ ಪ್ರಕ್ಷಿಪ್ತ ಎಂದು ಹೇಳುತ್ತಾರೆ. ಆದರೆ ಲಕ್ಷಾಲಂಕಾರದಲ್ಲಿ ಆ ಅಧ್ಯಾಯಗಳ ಕೆಲವು ಶ್ಲೋಕಗಳನ್ನು ಹಿಡಿದು ವ್ಯಾಖ್ಯಾನ ಮಾಡಿದ್ದಾರೆ. ಆದ್ದರಿಂದ ಆ ಭಾಗಗಳು ವಾದಿರಾಜರಿಗಿಂತ ಹಿಂದಿನ ಕಾಲದಿಂದಲೂ ಗ್ರಂಥಸ್ಥವಾಗಿದೆ ಮತ್ತು ವಾದಿರಾಜರಿಗೆ ಸಮ್ಮತವಾಗಿದೆ ಎಂದು ತಿಳಿದುಬರುತ್ತದೆ. ಅಲ್ಲದೆ

ಕುಂತಿಯು ವನದಲ್ಲಿ ಮಕ್ಕಳನ್ನು ಪಡೆಯುವುದಕ್ಕಿಂತ ಮೊದಲು ಪಾಂಡುವಿನ ಜೊತೆಯಲ್ಲಿ ಮಾತನಾಡುತ್ತಾ ಸತ್ಯವತಿ ಪರಾಶರರ ವಿವಾಹವನ್ನು ಉಲ್ಲೇಖಿಸುತ್ತಾಳೆ. ಆದ್ದರಿಂದ ವಿನಾ ಕಾರಣ ಅಧ್ಯಾಯಗಳನ್ನಾಗಲೀ, ಆಖ್ಯಾನಗಳನ್ನಾಗಲೀ ಅಥವಾ ಶ್ಲೋಕಗಳನ್ನಾಗಲೀ ಪ್ರಕ್ಷಿಪ್ತ ಎಂದು ಹೇಳುವುದರಲ್ಲಿ ಯಾವ ಅರ್ಥವೂ ಇಲ್ಲ.

ಕಣಿಂಕ (ಕಳಿಂಗ)ನ ದುರ್ನೀತಿಯ ಉಪದೇಶದ ನಿರೂಪಣೆಯು ೧೪೨ನೆಯ ಅಧ್ಯಾಯದಲ್ಲಿದೆ. ಮುದ್ರಿತ ಪುಸ್ತಕಗಳಲ್ಲಿ ಧೃತರಾಷ್ಟ್ರನ ಸಮ್ಮುಖದಲ್ಲಿಯೇ ಕಣಿಂಕನು ಉಪದೇಶ ಮಾಡಿದನೆಂದೂ ಕೊನೆಯಲ್ಲಿ ಧೃತರಾಷ್ಟ್ರನು ವಿಷಣ್ಣನಾದನೆಂದೂ ವಾಕ್ಯಗಳಿವೆ. ಆದರೆ ಆಚಾರ್ಯರು 'ಅಜ್ಞಾತ ಏವ ಧೃತರಾಷ್ಟ್ರಮುಖ್ಯೈಃ...' ಎಂದು ಧೃತರಾಷ್ಟ್ರನಿಗೆ ತಿಳಿಯದಂತೆ ಕಣಿಂಕನು ಉಪದೇಶ ಮಾಡಿದನೆಂದು ಹೇಳಿರುವುದರಿಂದ ಧೃತರಾಷ್ಟ್ರನ ಸಮ್ಮುಖದಲ್ಲಿ ಉಪದೇಶ ಮಾಡಿದನೆಂಬುದು ಅಪ್ರಾಮಾಣಿಕವಾದುದು. ಬಹುಶಃ ಎರಡು ಅಧ್ಯಾಯಗಳಲ್ಲಿ ಧೃತರಾಷ್ಟ್ರನ ಎದುರಿನಲ್ಲಿ ಸ್ವಲ್ಪ ಒಳ್ಳೆಯ ಮಾತುಗಳನ್ನಾಡಿ, ಅವನ ಅನುಪಸ್ಥಿತಿಯಲ್ಲಿ ದುರ್ಯೋಧನಾದಿಗಳನ್ನು ಕುರಿತು ಈ ಅಧ್ಯಾಯದಲ್ಲಿರುವ ಉಪದೇಶವನ್ನು ಮಾಡಿದನೆಂದು ಹೇಳಲು ಸಾಧ್ಯವಾಗಿದ್ದರೆ ಸಮಂಜಸವಾಗುತ್ತಿತ್ತು. ಆದರೆ ಅವನ ಉಲ್ಲೇಖವು ಒಂದೇ ಅಧ್ಯಾಯದಲ್ಲಿ ಬಂದಿರುವುದರಿಂದ ನಮಗೆ ಹಾಗೆ ನಿರ್ಣಯ ಮಾಡಲು ಸಾಧ್ಯವಿಲ್ಲ. ಕಾಲಕ್ರಮದಲ್ಲಿ ಒಂದು ಅಧ್ಯಾಯವು ಲುಪ್ತವಾಗಿರಲೂ ಬಹುದು.

ಮುದ್ರಿತ ಪುಸ್ತಕಗಳಲ್ಲಿಯೂ ತಾಳೆಗರಿಗಳಲ್ಲಿಯೂ ಯಯಾತಿಯ ಉಪಾಖ್ಯಾನ ಮತ್ತು ದುಷ್ಯಂತನ ಉಪಾಖ್ಯಾನಗಳು ಒಂದೊಂದರಲ್ಲಿ ಒಂದೊಂದು ರೀತಿ ಇದೆ. ಕೆಲವು ಪ್ರತಿಗಳಲ್ಲಿ ದುಷ್ಯಂತನ ಉಪಾಖ್ಯಾನ ಮೊದಲು ಬರುತ್ತದೆ. ಇನ್ನು ಕೆಲವು ಪ್ರತಿಗಳಲ್ಲಿ ಯಯಾತಿಯ ಉಪಾಖ್ಯಾನವು ಮೊದಲು ಬರುತ್ತದೆ. ಆದರೆ ಪುರುವಂಶದಲ್ಲಿ ಮೊದಲು ಯಯಾತಿಯು ಬಂದು ಅನಂತರ ಅನೇಕ ರಾಜರುಗಳ ನಂತರ ಇಲಿನ ಮಗನಾಗಿ ದುಷ್ಯಂತನು ಬರುವುದರಿಂದ ನಾವು ಯಯಾತಿಯ ಚರಿತೆಯನ್ನು ಮೊದಲು ಹೇಳುವ ತಾಳೆಗರಿಯ ಪಾಠವನ್ನು ಅನುಸರಿಸಿ ಆದರಂತೆಯೇ ಇಲ್ಲಿ ನಿವೇಶ ಮಾಡಿದ್ದೇವೆ.

ದ್ರೌಪದಿಯ ಪಂಚಪತಿತ್ವ ವಿಷಯದಲ್ಲಿಯೂ ಸಮಸ್ಯೆ ಇದೆ. ಪಾರ್ವತಿ, ಶ್ಯಾಮಲಾ, ಶಚಿ ಮತ್ತು ಉಷೆಯರು ಬ್ರಹ್ಮದೇವರ ಶಾಪನಿಮಿತ್ತವಾಗಿ ನಾಲ್ಕುಬಾರಿ ಭೂಮಿಯಲ್ಲಿ ಅವತಾರ ಮಾಡಬೇಕಾಗಿ ಬಂದಾಗ ಅವರೆಲ್ಲರೂ ಭಾರತಿಯನ್ನು ಕುರಿತು ತಪಸ್ಸು ಮಾಡಿ 'ಅತಸ್ತ್ವಯ್ಯೈಕದೇಹತ್ವಮಿಚ್ಛಾಮೋ ದೇವಿ ಜನ್ಮಸು । ಚತುರ್ಷ್ವಪಿ ಯತೋಽಸ್ಮಾಕಂ ಶಾಪದ್ವಯ ನಿಮಿತ್ತತಃ' (ನಮಗೆ ಎರಡು ಶಾಪಗಳಿಂದ ಬಂದಿರುವ ನಾಲ್ಕು

ಜನ್ಮಗಳಲ್ಲಿಯೂ ನಿನ್ನ ಜೊತೆಯಲ್ಲಿ ಏಕದೇಹತ್ವವನ್ನು ಬಯಸುತ್ತೇವೆ) ಎಂದು ಕೇಳಿಕೊಂಡಿದ್ದಾರೆ. ಆದ್ದರಿಂದ ಭಾರತಿ ಮತ್ತು ಆ ನಾಲ್ಕು ದೇವಿಯರು ಒಂದೇ ದೇಹದಲ್ಲಿರುವ ನಾಲ್ಕು ಜನ್ಮಗಳು ಬೇಕು. ಆ ನಾಲ್ಕು ಜನ್ಮಗಳು ಯಾವುವು ಎಂಬುದು ಪ್ರಶ್ನೆ. ವಿಪ್ರಕನ್ಯಾ, ಇಂದ್ರಸೇನಾ, ದ್ರೌಪದಿ ಇವು ಮೂರು ಜನ್ಮಗಳು ಎಂದು ಬಹಳ ಜನ ವ್ಯಾಖ್ಯಾತೃಗಳು ಹೇಳುತ್ತಾರೆ. ಹಾಗಾದರೆ ನಾಲ್ಕನೆಯ ಜನ್ಮ ಯಾವುದು? ಆದು ಆಚಾರ್ಯರು ಅವತಾರ ಮಾಡಿದಾಗ ಭಾರತಿಯು ಅವತಾರ ಮಾಡಿದ 'ಚಂದ್ರಾ' ಎಂದು ಕೆಲವು ವಿಮರ್ಶಕರು ಹೇಳುತ್ತಾರೆ. 'ಕಾಲೀ ಚಂದ್ರೇತಿ ಚೋಚ್ಯತೇ', 'ತದ್ವೈವ ಕೃಷ್ಣಾಪಿ ಭುವಿ ಪ್ರಜಾತಾ' ಎಂಬ ತಾತ್ಪರ್ಯನಿರ್ಣಯ ವಾಕ್ಯಗಳು ಈ ವಿಷಯಕ್ಕೆ ಪುಷ್ಟಿ ಕೊಡುತ್ತದೆ ಎಂದು ಅಭಿಪ್ರಾಯ ಪಡುತ್ತಾರೆ. ಇದನ್ನು ಇನ್ನು ಕೆಲವರು ಒಪ್ಪುವುದಿಲ್ಲ. ಭಾರತಿಯ ನಾಮಗಳನ್ನು ಹೇಳುವ ಸಂದರ್ಭದಲ್ಲಿ ಬೃಹದಾರಣ್ಯಕ ಭಾಷ್ಯದಲ್ಲಿ 'ಶಿವಕನ್ಯೇಂದ್ರಸೇನಾ ಚ ದ್ರೌಪದೀ ಕಾಶಿಜಾ ತಥಾ । ಚಂದ್ರೇಕ್ಯಾದಿ ಸ್ವರಣಪಾಯಾಃ' ಎಂದು ಕಾಶಿಜಾ (ಕಾಳೀ), ಚಂದ್ರಾ ಇವು ಭಾರತಿಯ ಹೆಸರುಗಳೆಂದು ಹೇಳಿರುವುದರಿಂದ ಈ ಎರಡು ವಾಕ್ಯಗಳನ್ನೂ ಶುದ್ಧ ಭಾರತಿಯ ಸ್ವರೂಪದ ವಿವಕ್ಷೆಯಿಂದಲೇ ಕೂಡಿಸಬಹುದು ಎಂದು ಅಭಿಪ್ರಾಯಪಡುತ್ತಾರೆ. ವಾದಿರಾಜರು ಮಾತ್ರ ಆದಿಪರ್ವ ೧೯೬-೩೦ ರಲ್ಲಿ

> **'ಪುರಾ ಪೂರ್ವಜನ್ಮನಿ ಪೂರ್ವೋಕ್ತ ಪ್ರಕಾರೇಣ ನಾಳಾಯನೀತಿ ವಿಶ್ರುತಾ । ಪಶ್ಚಾತ್ ಸೈವ ಇಂದ್ರಸೇನೇತಿ ವಿಖ್ಯಾತಾ ಜಾತಾ । ಪೂರ್ವಜನ್ಮನಿ ನಾಳಾಯನೀತಿ ವಿಶ್ರುತಾ ನಳಪ್ರತೀತತ್ವಾತ್ ಸೈವ ನಾಳಾಯನೀ ನಳನಂದನೀತಿ ಚ ವಿಶ್ರುತಾ । ತಸ್ಯಾಃ ಮುದ್ಗಲಃ ಪತಿಃ । ದ್ವಿತೀಯೇ ಜನ್ಮನಿ ಇಂದ್ರಸೇನಾ । ತಸ್ಯಾಮೌದ್ಗಲ್ಯಃ ಮುದ್ಗಲಪುತ್ರಃ ಪತಿಃ'**

ಹಿಂದಿನ ಜನ್ಮದಲ್ಲಿ ನಳನ ಪುತ್ರಿಯಾಗಿದ್ದ ಇಂದ್ರಸೇನೆಯೇ ನಳನ ಪುತ್ರಿಯಾದ ಕಾರಣದಿಂದ ನಾಳಾಯನೀ ಎಂದು ನಳನಂದಿನೀ ಎಂದೂ ಪ್ರಖ್ಯಾತಳಾಗಿದ್ದಳು. ಮುಂದಿನ ಜನ್ಮದಲ್ಲಿ ಅವಳಿಗೆ ಇಂದ್ರಸೇನಾ ಎಂದು ಹೆಸರು. ಈ ಜನ್ಮದಲ್ಲಿ ನಳನ ಪುತ್ರಿಯಲ್ಲ. ಹೀಗಾಗಿ ಇಂದ್ರಸೇನೆಯರು ಇಬ್ಬರು. ಮೊದಲನೆಯ ಇಂದ್ರಸೇನೆಗೆ ಮುದ್ಗಲರು ಪತಿ. ಎರಡನೆಯ ಇಂದ್ರಸೇನೆಗೆ ಮುದ್ಗಲಪುತ್ರರಾದ ಮೌದ್ಗಲ್ಯರು ಪತಿ ಎಂದು ಹೇಳಿದ್ದಾರೆ. ಈ ಕಲ್ಪದಲ್ಲಿ ನಾಲ್ಕುಜನ್ಮಗಳನ್ನೂ ಕೂಡಿಸುವುದಕ್ಕೆ ತೊಂದರೆ ಇಲ್ಲ. ಆದರೆ ಎರಡನೆಯ ಇಂದ್ರಸೇನೆಯ ಮಾತಾಪಿತೃಗಳು ಯಾರು ಎಂಬ ವಿಷಯವು ತಿಳಿಯುವುದಿಲ್ಲ. ಅಲ್ಲದೆ ಆಚಾರ್ಯರು ಮುದ್ಗಲರಿಗೆ ಶಾಪ ಬಂದುದು, ಅವರು ಇಂದ್ರಸೇನೆಗೆ ಪತಿಯಾಗಬೇಕಾಗಿ ಬಂದುದು, ಅವರ ದೇಹದಲ್ಲಿದ್ದು ವಾಯುದೇವರೇ

ಎಲ್ಲವನ್ನೂ ನಿರ್ವಹಿಸಿದುದು ಈ ಎಲ್ಲಾ ವಿಷಯಗಳನ್ನೂ ಹೇಳಿದ್ದಾರೆ. ಮುದ್ಗಲ ಪುತ್ರರಾದ ಮೌದ್ಗಲ್ಯರ ವಿಷಯದಲ್ಲಿ ಯಾವ ಮಾತನ್ನೂ ಆಡಿಲ್ಲ. ಆದ್ದರಿಂದ ಲಕ್ಷಾಲಂಕಾರವನ್ನು ಅರ್ಥಮಾಡಿಕೊಳ್ಳುವುದು ಹೇಗೆ ಎಂದು ಪ್ರಶ್ನೆ. ಅಲ್ಲದೆ ಮಹಾಭಾರತ ಮೂಲದಲ್ಲಿ ಈ ಪ್ರಕರಣದಲ್ಲಿ ಮೌದ್ಗಲ್ಯ ಎಂಬ ಹೆಸರಿದೆಯೇ ಹೊರತು ಮುದ್ಗಲ ಎಂಬ ಹೆಸರಿಲ್ಲ. ಮುದ್ಗಲ ಏವ ಮೌದ್ಗಲ್ಯಃ ಎಂದು ವ್ಯಾಖ್ಯಾನ ಮಾಡಿ ಮೌದ್ಗಲ್ಯ ಎಂದರೆ ಮುದ್ಗಲರೇ ಎಂದು ಹೇಳುವುದಾದರೆ ಮುದ್ಗಲಪುತ್ರರಾದ ಮೌದ್ಗಲ್ಯರ ಪ್ರಸ್ತಾಪವನ್ನು ಹೇಗೆ ಕೂಡಿಸಬೇಕೆಂದು ಪ್ರಶ್ನೆಯು ಹಾಗೆಯೇ ಉಳಿಯುತ್ತದೆ.

ಹೀಗೆ ಅಲ್ಲಲ್ಲಿ ಅಧ್ಯೇತೃಗಳಿಗೆ ಇನ್ನೂ ಅನೇಕ ಪ್ರಶ್ನೆಗಳು ಬರಬಹುದು. ವಿದ್ವಾಂಸರು ವಿಮರ್ಶೆ ಮಾಡಿ ಪರಿಹಾರಗಳನ್ನು ಕಂಡುಕೊಳ್ಳಬೇಕಾಗುತ್ತದೆ.

ಈ ಕಾರ್ಯಕ್ಕೆ ಪ್ರೇರಕರಾದ ಹರಿಪದವಾಸಿಗಳಾದ ಶ್ರೀವಿದ್ಯಾಮಾನ್ಯತೀರ್ಥರನ್ನು ಮತ್ತು ನಮ್ಮ ವಿದ್ಯಾಗುರುಗಳಾದ ಶ್ರೀಪೇಜಾವರ ಮಠಾಧೀಶರನ್ನೂ ಭಕ್ತಿಯಿಂದ ನಮಸ್ಕರಿಸುತ್ತೇನೆ. ಪಲಿಮಾರು ಮಠಾಧೀಶರಾದ ಶ್ರೀ ವಿದ್ಯಾಧೀಶತೀರ್ಥರ ಅದಮ್ಯ ಉತ್ಸಾಹ ಮತ್ತು ನಮ್ಮ ಮೇಲಿನ ಅನುಗ್ರಹದಿಂದ ಈ ಗ್ರಂಥವು ಪ್ರಕಾಶವನ್ನು ಕಾಣುತ್ತಿದೆ. ಅನೇಕ ವಿಷಯಗಳನ್ನು ಚರ್ಚಿಸಿ ಸೂಕ್ತವಾದ ಮಾರ್ಗದರ್ಶನವನ್ನು ನೀಡಿದ ಶ್ರೀ ಭಂಡಾರಕೇರಿ ಮಠಾಧೀಶರಾದ ಶ್ರೀ ವಿದ್ಯೇಶತೀರ್ಥರನ್ನೂ ಮತ್ತು ಶ್ರೀ ರಾಘವೇಂದ್ರ ಮಠದ ಶ್ರೀ ಸುಶಮೀಂದ್ರತೀರ್ಥರ ವರಕುಮಾರರಾದ ಶ್ರೀ ಸುವಿದ್ಯೇಂದ್ರತೀರ್ಥರನ್ನೂ ಈ ಸಂದರ್ಭದಲ್ಲಿ ಭಕ್ತಿಯಿಂದ ಸ್ಮರಿಸಿ ನಮಸ್ಕರಿಸುತ್ತೇನೆ. ಶ್ರೀ ಬನ್ನಂಜೆ ಗೋವಿಂದಾಚಾರ್ಯರ ಜೊತೆಯಲ್ಲಿಯೂ ಅನೇಕ ವಿಷಯಗಳನ್ನು ಚರ್ಚಿಸಿ ಸಲಹೆಯನ್ನು ಪಡೆದಿದ್ದೇನೆ. ಅವರಿಗೂ ನನ್ನ ಕೃತಜ್ಞತೆಗಳು. ಈ ಕಾರ್ಯದಲ್ಲಿ ಎಡಬಿಡದೆ ನನ್ನ ಜೊತೆಯಲ್ಲಿರುವ ನಮ್ಮ ಅಣ್ಣನವರ ಸುಪುತ್ರ ಚಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯರಿಗೂ ಮತ್ತು ನನಗೆ ಸಹಾಯ ಮಾಡಿರುವ ಉಳಿದೆಲ್ಲರಿಗೂ ಧನ್ಯವಾದಗಳು.

– ಶ್ರೀಪಾದ ಚರಣ ಸೇವಕ
ಪಿ.ಎಸ್. ಶೇಷಗಿರಿ ಆಚಾರ್ಯ

—o—

# ಪ್ರಕಾಶಕರ ನುಡಿ

ಸಾಕ್ಷಾತ್ ಶ್ರೀಮನ್ನಾರಾಯಣನ ಅವತಾರಭೂತರಾದ ಬಾದರಾಯಣರಿಂದ ಪ್ರಣೀತವಾದ ಮಹಾಭಾರತವೆಂಬ ಇತಿಹಾಸಗ್ರಂಥವು ಪೌರುಷೇಯವಾದ ಪಂಚಮ ವೇದವೆನಿಸಿದೆ. 'ವೇದಾದಪಿ ಪರಂ ಚಕ್ರೇ ಪಂಚಮಂ ವೇದಮುತ್ತಮಮ್' ಎಂಬ ಹೆಗ್ಗಳಿಕೆ ಭಾರತದ್ದು. ಭಾರತವನ್ನು ರಚಿಸಿದ ಭಗವಾನ್ ವ್ಯಾಸರ ಬಗ್ಗೆ 'ದೇವತಾನಾಂ ಯಥಾ ವ್ಯಾಸಃ' ಎಂದು ವ್ಯಾಸರೇ ಉದ್ಗರಿಸಿದ್ದಾರೆ. 'ಕೋಹ್ಯನ್ಯಃ ಪುಂಡರೀಕಾಕ್ಷಾತ್ ಮಹಾಭಾರತ ಕೃದ್ ಭವೇತ್' ಎಂಬ ವ್ಯಾಸರ ಮಾತೇ ವ್ಯಾಸರ ದೇವತ್ವಕ್ಕೆ ಪ್ರಮಾಣ. ಇಂತಹ ವ್ಯಾಸರ ಭಾರತವು 'ವಿಶ್ವದ ಸಂಪತ್ತು' ಎನಿಸಿದೆ. ಹೀಗಿದ್ದರೂ ಈ ಸಂಪತ್ತನ್ನು ಸುಲಭವಾಗಿ ಎಲ್ಲರಿಗೂ ಅನುಭವಿಸಲಾಗದು. ಭಾರತದ ಶ್ಲೋಕ-ಶ್ಲೋಕಗಳಿಗೆ ನೂರು ಅರ್ಥಗಳಿವೆ. ದರ್ಶನ-ಗುಹ್ಯ-ಸಮಾಧಿಗಳೆಂಬ ಭಾಷಾ ತ್ರೈವಿಧ್ಯವಿದೆ. ಆದ್ದರಿಂದಲೇ ಲಕ್ಷಾಭರಣದ ವ್ಯಾಖ್ಯೆಯ ಕೊನೆಯಲ್ಲಿ 'ಭಾರತಸ್ಯ ಸುಧಾಂಬೋಧೇಃ ಭಾರತೀಶಾದಯಃ ಸುರಾಃ । ಯಥಾವನ್ ಮಥನೇ ಶಕ್ತಾಃ ಕೃತಶಿಕ್ಷಾಹರೇರ್ಮುಖಾತ್ ।' ಎಂದು ಹೇಳಿದ್ದಾರೆ. ಬ್ರಹ್ಮಾದಿಗಳು ವ್ಯಾಖ್ಯಾನ ಮಾಡಲು ಅರ್ಹರು. ಆದ್ದರಿಂದಲೇ ಸತ್ಯಲೋಕಾಧಿಪತಿಗಳಾದ ವಾಯುದೇವರು ಆನಂದತೀರ್ಥರಾಗಿ ಅವತರಿಸಿ ಮಹಾಭಾರತ ತಾತ್ಪರ್ಯ ನಿರ್ಣಯವನ್ನು ರಚಿಸಿದ್ದಾರೆ.

ಮಹಾಭಾರತ ಮೂಲಶೋಧನೆಯಲ್ಲಿ ಸಹಕಾರಿಗಳಾಗಿ ನಿಲ್ಲಬಲ್ಲ ಎರಡು ವ್ಯಾಖ್ಯಾನಗಳು ತಾತ್ಪರ್ಯನಿರ್ಣಯ ಮತ್ತು ಲಕ್ಷಾಲಂಕಾರ. ಇವೆರಡೂ ಮಾಧ್ವರ ಸಂಪತ್ತು ಎಂಬುದು ಹೆಮ್ಮೆಯ ವಿಷಯ. ಪ್ರತಿಶ್ಲೋಕಗಳ ಅನುವಾದದ ಸಂದರ್ಭದಲ್ಲಿ ಲಕ್ಷಾಲಂಕಾರವಿಲ್ಲದೆ ವ್ಯಾಖ್ಯಾನಿಸುವುದು ಅನರ್ಥಕ್ಕೆ ಕಾರಣವಾಗುತ್ತದೆ. ಉದಾ:-

★ 'ಕುಂತ್ಯಾ ಸಾಹ್ಯಂ ದ್ವೈಪಾಯನೋಽಬ್ರವೀತ್' ಎಂಬಲ್ಲಿ ಎಲ್ಲರೂ 'ಸಾಹ್ಯಂ= ಸಹಾಯವನ್ನು ಎಂದು ವ್ಯಾಖ್ಯಾನಿಸಿದ್ದಾರೆ. ಆದರೆ ರಾಜರು ಸಾಹ್ಯಂ= ಸಹನಶೀಲತಾ ಎಂದು ಸಂದರ್ಭೋಚಿತವಾಗಿ ವ್ಯಾಖ್ಯಾನಿಸಿದ್ದಾರೆ.

★ 'ಸುಭದ್ರಾಹರಣಾದೂರ್ಧ್ವಂ ಜ್ಞೇಯಂ ಹರಣಹಾರಿತಂ' ಎಂಬ ಅನುಕ್ರಮಣಿಕಾ ಅಧ್ಯಾಯದಲ್ಲಿ ಹರಣಹಾರಿತ ಎನ್ನುವುದನ್ನು ಯಾರು ಅನುವಾದಿಸಿಲ್ಲ. ರಾಜರು 'ಹರೇರಿದಂ ಹಾರಿ ತಸ್ಯಹರಣಸ್ಯ ಭಾವಃ ಹಾರಿತಾ ಹರಣಹಾರಿತಾ' ಎಂದು ವ್ಯಾಖ್ಯಾನಿಸಿದ್ದಾರೆ. ಸುಭದ್ರಾಹರಣಕ್ಕೆ ಶ್ರೀಹರಿಯ ಸಹಾಯವು ಎಂಬ ಕಥೆಯನ್ನು ಈ ಶಬ್ದದಿಂದ ತೋರಿಸಿದ್ದಾರೆ.

- ★ ಮಂತ್ರಪರ್ವ ತತಃ ಪರಂ= ರಾಜಸೂಯಾದ್ಯಾಲೋಚನ ಪರ್ವ.
- ★ 'ಅಚೋದಯದಮೇಯಾತ್ಮಾ ಫಣೀಂದ್ರಂ ಪದ್ಮಲೋಚನಃ' ಎಂಬ ಸಮುದ್ರ ಮಥನ ಪ್ರಕರಣದ ವಾಕ್ಯದಲ್ಲಿ ಫಣೀಂದ್ರನು ಮಂದರಗಿರಿಯನ್ನು ತಂದ ಎಂದು ಭಾಗವತಕ್ಕೆ ವಿರುದ್ಧವಾದಾಗ ಫಣೀಂದ್ರ ಪದಕ್ಕೆ 'ಗರುಡ'ನೆಂದು ವ್ಯಾಖ್ಯಾನಿಸಿ ವಿರೋಧ ಪರಿಹರಿಸಿದ್ದಾರೆ. 'ಫಣಿನಾಂ ಈಂ ಐಶ್ವರ್ಯಂ ದ್ರಾವಯತೀತಿ ಫಣೀಂದ್ರಃ'.
- ★ ಶ್ರಪಿತಾರ= ಅಡಿಗೆಯವವ
- ★ ಪ್ರಸ್ಥ= ಅಳತೆ ಬಟ್ಟಲು
- ★ ಶಾರ್ದೂಲ= ಶತರೇಖೋಪೇತ ಹಿಂಸ್ರಪ್ರಾಣಿ
- ★ ದ್ವೀಪಿ= ಸೂಕ್ಷ್ಮರೇಖಾಂಕನ ಉಳ್ಳ ಹಿಂಸ್ರಪ್ರಾಣಿ
- ★ ವಿಪೋಟಕಃ= ಸದೋಷಃ ಸ್ವಯಮನ್ಯೇಷಾಂ ನಿಂದಕಸ್ತು ವಿಪೋಟಕಃ
- ★ ರತ್ನಿ= ಮುಷ್ಟಿ ಅಳತೆ
- ★ ಅರತ್ನಿ= ಒಂದು ಗೇಣು. 'ಬದ್ಧ ಮುಷ್ಟಿಃ ಸ್ಮೃತೋ ರತ್ನಿರರತ್ನಿಃ ಪ್ರಸೃತಾಂಗುಲಿಃ' ಹಲಾಯುಧ.
- ★ ಖಗಮಾ= 'ಖಂ ಗಚ್ಛಂತೀತಿ ಖಗಮಾಃ' = ಬಾಣಗಳು
- ★ ಐಷ್ಟಕಃ= ಇಟ್ಟಿಗೆ ಮಾಡುವವ ದಾರುಕ= ಬಡಗಿ, ವಪ್ರಮಾನುಷಃ= ಗೋಡೆ ಕಟ್ಟುವವ
- ★ ಅರಿಷ್ಟಃ= ಕಾಗೆ 'ಅರಿಷ್ಟಃ ಕಶಟಃ ಕಾಕಃ' ಹಲಾಯುಧ
- ★ ಸ್ತ್ರೀ= ಒಮ್ಮೆ ಹಡೆದವಳು. ಗೌರೀ= ಇಪ್ಪತ್ತೆರಡು ವರ್ಷದವಳು ಶ್ಯಾಮಾ= ಯೌವ್ವನದ ಮಧ್ಯದಲ್ಲಿರುವವಳು. 'ದ್ವಾವಿಂಶದ್ವಾರ್ಷಿಕಾ ಗೌರೀ ಶ್ಯಾಮಾ ಯೌವನಮಧ್ಯಗಾ'
- ★ ಕೃತಾಕೃತಂ= ಬಂಗಾರ 'ಹೇಮರೂಪ್ಯೇ ಕೃತಾಕೃತೇ'
- ★ ಕಿಷ್ಕು= ಹಸ್ತಪರಿಮಿತಿ 'ಮೊಳ' 'ಕಿಷ್ಕುರ್ಹಸ್ತೇ ವಿತಸ್ತೌ ಚ'
- ★ ಕಲಾಪ= ಭೂಷಣ 'ಕಲಾಪೋ ಭೂಷಣೇ ಬರ್ಹೇ' ಅಭಿಧಾನ
- ★ ಪೌಷ್ಕರಿಕ= ಪದ್ಮನಾಭ
- ★ ತ್ರಿಶಿಖಾ= ಕೋಪದಿಂದ ಮೂಡಿದ ಹಣೆಯ ರೇಖೆಗಳು
- ★ ಗೋಶೀರ್ಷಕಂ=ಗೋರೋಚನ 'ತೈಲಪರ್ಣಿಕ ಗೋಶೀರ್ಷ ಹರಿಚಂದನಮಸ್ತ್ರಿಯಾಂ'

★ ಕಾಲೇಯಕ= ಕಾಶ್ಮೀರಿ ಕುಂಕುಮ (ಕಾಲೀದೇಶದಲ್ಲಿ ಹುಟ್ಟಿದ್ದು ಕಾಲೇಯಕ)

★ ಕುಣೀನಾಮಿವ ಬಿಲ್ವಾನಿ= ಕುಣಿ= ಕುತ್ಸಿತವಾದ ಕೈಯುಳ್ಳವ 'ಸ್ಯಾದೇಡೇ ಬಧಿರಃ ಕುಬ್ಜೇ ಜಡುಲಃ ಕುಕರೇ ಕುಣಿಃ'

★ ಶೀಧುಪಾನೇನ= ಮಧುಪಾನದಿಂದ 'ಮೈರೇಯಮಾಸವಃ ಶೀಧುಃ'

★ ಪೃಥುಪ್ರೋಥಾನ್ಮಹಾಹನೂನ್= ಪೃಥು= ಪೃಷ್ಟವು ಪ್ರೋಥಃ= ಕಟಿ ಪ್ರದೇಶವು 'ಸ್ತ್ರಿಯಾಂ ಸ್ಫಿಜಾಕಟಿಃ ಪ್ರೋಥ ಉಪಸ್ಥೋ ವಕ್ಷ್ಯಮಾಣಯೋಃ'

★ ಅರಂಜಲ= ರಂಜಣಿಗೆ

★ ನಗ್ನಿಕಾ= ಅಪ್ರೌಢ ಕನ್ಯಾ 'ನಗ್ನಿಕಾನಾಗತಾರ್ತವಾ'

ಹೀಗೆ ಅನೇಕ ಕಠಿಣವಾಕ್ಯಗಳಿಗೆ ಸಂದರ್ಭೋಚಿತವಾಗಿ ವ್ಯಾಖ್ಯಾನಿಸುವ ಕೌಶಲ ರಾಜರದ್ದು.

★ ಮತ್ತೊಂದು ಕಡೆ 'ಸರಸ್ವತ್ಯಾಂ ಜರಾಸಂಧಂ' ಎಂದಿದೆ. ಸರಾಂಸಿ ಅಸ್ಯಾಂ ಅಸ್ತಿ ಇತಿ ಸರಸ್ವತೀ ಎಲ್ಲ ನದಿಗಳು ಇವಳಲ್ಲಿ ಇವೆಯಾದ್ದರಿಂದ ಸರಸ್ವತೀ ಎಂದರೆ 'ಯಮುನೆ' ಎಂದರ್ಥ ಮಾಡಿದ್ದಾರೆ.

★ ಪಾಂಡುವರೆಲ್ಲರು ಭಾರ್ಗವ ಕರ್ಮಶಾಲೆಯನ್ನು ಪ್ರವೇಶಿಸಿದರು ಎಂದಿದೆ. ಇಲ್ಲಿ ಭಾರ್ಗವ ಶಬ್ದಾರ್ಥ ತಿಳಿಯದು. ಭಾರ್ಗವ= ಕುಂಬಾರ. ಬಿಭರ್ತಿ ಭಾಂಡಭಾರಂ ಗಚ್ಛತಿ ವಾಪಯತಿ ಪ್ರಾಪಯತಿ ತತ್ತದಪೇಕ್ಷಿತ ಪಾತ್ರಾಣಿ ಇತಿ ಭಾರ್ಗವಃ. 'ಕುಲಾಲೋ ಭಾರ್ಗವಶ್ಚೈವ ಕುಂಭಕಾರೋ ನಿಗದ್ಯತೇ' ಅನುಶಾಸನ.

★ 'ರೇತೋಧಾಃ ಪುತ್ರಂ ನಯತಿ' ಎಂಬುದು ಶಕುಂತಲೆಯು ದುಷ್ಯಂತನಿಗೆ ಹೇಳುವ ವಚನ. ರೇತೋಧಾತಾರನಾದ ತಂದೆಯನ್ನು ಅಕ್ಷಯಲೋಕವನ್ನು ಕುರಿತು ಒಯ್ಯುತ್ತಾನೆ. ಇಲ್ಲಿ 'ರೇತೋಧಾತಾರಂ' ಎಂದಾಗಬೇಕಿತ್ತು. 'ವ್ಯತ್ಯಯೋ ಬಹುಲಮ್ ಎಂಬ ಸೂತ್ರದಿಂದ ತಮ್ಮ ಗ್ರಂಥವು ವೇದಸಮಾನವೆಂದು ತೋರಿಸಲು ವ್ಯಾಸರು ಹೀಗೆ ವ್ಯತ್ಯಾಸಗಳನ್ನು ಮಾಡಿದ್ದಾರೆ.

★ ಇದೇ ಪ್ರಸಂಗದಲ್ಲಿ ಶಕುಂತಲೆಗೆ ದುಷ್ಯಂತನು 'ವಾಮಾಃ ಸ್ತ್ರಿಯಃ' 'ಅರಿಷ್ಟ ಇವ ದುರ್ಬುದ್ಧಿಃ' ಎಂದು ನಿಂದಿಸುತ್ತಾನೆ. ಇಲ್ಲಿ ರಾಜರು ವಾಮಾಃ= ಗಂಡನಿಗೆ ಪ್ರತೀಕಾರ ಮಾಡುವವರು ಎಂದು ಕೋಶದ ಆಧಾರದಲ್ಲಿ ಅರ್ಥೈಸಿದ್ದಾರೆ. ಅರಿಷ್ಟ ಇವ= ಎಂದರೆ ಕಾಗೆಯಂತೆ ಎಂದು ಅರ್ಥೈಸಿದ್ದಾರೆ.

'ಬ್ರಹ್ಮಾಪಿ ತನ್ನ ಜಾನಾತಿ ಈಷತ್ಸರ್ವೋಽಪಿ ಜಾನತಿ ।
ಬಹ್ವರ್ಥಂ ಋಷಯಸ್ತತ್ತು ಭಾರತಂ ಪ್ರವದಂತಿ ಹಿ ॥'

ಎಂಬ ಮಾತು ರಾಜರ ಲಕ್ಷಾಲಂಕಾರವನ್ನು ಗಮನಿಸಿದಾಗ ದಿಟವೆನಿಸುತ್ತದೆ.

ಸಂದಿಗ್ಧಾರ್ಥಕ, ವಿಪರೀತಾರ್ಥಕ ಶಬ್ದಗಳಿಗೆ ಸಾಂದರ್ಭಿಕವಾಗಿ ಸ್ವಾರಸ್ಯ ಪೂರ್ಣ ಅರ್ಥವನ್ನು ಹೇಳಿದ ಕೀರ್ತಿ ರಾಜರಿಗೆ ಸಲ್ಲುತ್ತದೆ.

ಇತ್ತೀಚೆಗೆ ಮಹಾಭಾರತದ ವಿಮರ್ಶಾತ್ಮಕ ಸಂಸ್ಕರಣವನ್ನು ಪ್ರಕಟಿಸಬೇಕೆಂದು ಆಧುನಿಕ ವಿದ್ವಾಂಸರು ಆಲೋಚಿಸಿದಾಗ ಮದ್ರಾಸ್ ವಿಶ್ವವಿದ್ಯಾನಿಲಯ ಪ್ರೊ. ಪಿ.ಎಸ್. ಶಾಸ್ತ್ರಿಯವರು ಶ್ರೀವಾದಿರಾಜರು ತಮ್ಮ ವ್ಯಾಖ್ಯಾನಕ್ಕೆ ಮೂಲವಾಗಿ ಹಿಡಿದ ಮಹಾಭಾರತದ ಪಾಠವೇ ಸರಿಯಾದ ಪಾಠ ಎಂದು ಹೇಳಿ ಅದನ್ನನುಸರಿಸಿಯೇ ತಮ್ಮ ವಿಮರ್ಶಾತ್ಮಕ ಸಂಸ್ಕರಣವನ್ನು ಪ್ರಕಟಿಸಿದರು. ಸಭಾಪರ್ವದ ಲಾಕ್ಷಾಭರಣವನ್ನು ಪ್ರಕಟಿಸಿರುವರು.

ವಾವಿಳ್ಳ ರಾಮಸ್ವಾಮಿಯವರ ಮುದ್ರಿತ ಪುಸ್ತಕದಲ್ಲಿಯೂ ಸಭಾಪರ್ವದಲ್ಲಿ ಲಕ್ಷಾಲಂಕಾರದ ವ್ಯಾಖ್ಯಾನವನ್ನು ಸೇರಿಸಿರುವುದು ಅಚ್ಚರಿಯ ಸಂಗತಿ. ಅವರು ಹಸ್ತಪ್ರತಿಗಳನ್ನು ಶೋಧನೆ ಮಾಡುವಾಗ ಲಕ್ಷಾಲಂಕಾರದ ಮಾರ್ಗದರ್ಶನದಲ್ಲಿಯೇ ಸಂಶೋಧನೆ ಮಾಡಿರುವುದು ಇದರಿಂದ ಸಾಬೀತಾಗುತ್ತದೆ. ಆದರೆ ಮುಂದಿನ ಪರ್ವಗಳಲ್ಲಿ ಲಕ್ಷಾಲಂಕಾರದ ಮುದ್ರಣವನ್ನು ಕೈಬಿಟ್ಟಿರುವುದು ಕಂಡು ಕೆಲವರು ತಡೆಯುಂಟು ಮಾಡಿದ್ದನ್ನು ಊಹಿಸಬಹುದು.

ಮುದ್ರಿತಪುಸ್ತಕಗಳಲ್ಲಿ ವಾವಿಳ್ಳ ರಾಮಸ್ವಾಮಿಯವರ ಪುಸ್ತಕ ನಮಗೆ ಹೆಚ್ಚು ಹತ್ತಿರವಿರುವುದನ್ನು ಇಲ್ಲಿ ಸ್ಪಷ್ಟಪಡಿಸಬೇಕಾಗಿದೆ.

ಪುಣೆಯ ಭಂಡಾರಕರ ಸಂಸ್ಥೆಯ ವಿಮರ್ಶಾತ್ಮಕ ಸಂಸ್ಕರಣದ ಯೋಜನೆಯನ್ನು ರೂಪಿಸಿದ ಡಾ|| ಸುಕ್ಥಂಕರರು ಕೂಡ ಲಕ್ಷಾಭರಣವನ್ನು ಅನುಸರಿಸುವ ಪಾಠ ಪ್ರಾಮಾಣಿಕ ಎಂದು ಸಾರಿದರು. ಅವರು ತಮ್ಮ 'Meaning of Mahabharatha' ಎಂಬ ಗ್ರಂಥದಲ್ಲಿ ಶ್ರೀಮಧ್ವಾಚಾರ್ಯರ ಮಹಾಭಾರತ ತಾತ್ಪರ್ಯ ನಿರ್ಣಯವನ್ನು ಮುಕ್ತಕಂಠದಿಂದ ಹೊಗಳಿರುವರು.

ಶ್ರೀವಾದಿರಾಜರು ಸನತ್ಸುಜಾತೀಯ ವಿಷ್ಣುಸಹಸ್ರನಾಮ ಇತ್ಯಾದಿ ಅಧ್ಯಾತ್ಮಿಕ ಭಾಗಗಳಿಗೆ ಲಾಕ್ಷಾಭರಣದಲ್ಲಿ ವಿಸ್ತಾರವಾಗಿ ವ್ಯಾಖ್ಯಾನ ಮಾಡಿರುವರು. ಆದ್ದರಿಂದ ಇವು ಪ್ರತ್ಯೇಕ ಗ್ರಂಥಗಳಂತೆಯೇ ಪ್ರಕಟಿಸಲ್ಪಟ್ಟಿರುವುವು. ಇನ್ನುಳಿದ ಕಡೆಗೆ ಮುಖ್ಯವಾದ

ಪದಗಳನ್ನು ಮಾತ್ರ ವಿವರಿಸಿರುವರು. ತಮ್ಮ ವ್ಯಾಖ್ಯಾನವನ್ನು ಸಮರ್ಥಿಸಲು ಅನೇಕ ಕೋಶಗಳ ವಚನಗಳನ್ನು ಉಲ್ಲೇಖಿಸಿರುವರು. ಶ್ರೀವಾದಿರಾಜರ ವ್ಯಾಖ್ಯಾನವು ಮೂರು ವೈಶಿಷ್ಟ್ಯಗಳಿಂದ ಕೂಡಿದೆ.

೧. ಆಪಾತತಃ ತೋರುವ ಅರ್ಥಕ್ಕಿಂತ ಆಳವಾಗಿ ಹೋಗಿ ದಾರ್ಶನಿಕ ಮಹತ್ವವುಳ್ಳ ಅರ್ಥಗಳನ್ನು ವಿವರಿಸುವರು.

೨. ಪ್ರಮೇಯಗಳ ವಿವರಗಳನ್ನೂ ಪೌರಾಣಿಕ ವಿವರಗಳನ್ನೂ ಒದಗಿಸುವರು.

೩. ಪೂರ್ವೋತ್ತರ ಕಥಾ ಸಂದರ್ಭಗಳನ್ನು ಒದಗಿಸುವರು ಮತ್ತು ವಿರೋಧವನ್ನು ಪರಿಹರಿಸುವರು.

ಉದಾಹರಣೆಗೆ 'ಕಾಲಃ ಸೃಜನೇ' ಎಂಬ ವಾಕ್ಯಕ್ಕೆ ಕಾಲವು ಸೃಷ್ಟಿ ಮಾಡುತ್ತತೆ ಎಂದು ಆಪಾತತಃ ಅರ್ಥವಾಗುತ್ತದೆ. ಇದನ್ನು ಶ್ರೀವಾದಿರಾಜರು 'ಕಲ ಜ್ಞಾನೇ' ಧಾತುವಿನಿಂದ ನಿಷ್ಪನ್ನವಾದ ಕಾಲ ಪದದಿಂದ ಕಾಲ ನಿಯಾಮಕ ಸರ್ವಜ್ಞನಾದ ವಿಷ್ಣುವು ವಾಚ್ಯನಾಗಿದ್ದಾನೆ. ಅವನೇ ಸೃಷ್ಟಿ ಮಾಡುತ್ತಾನೆ ಎಂದು ವಿವರಿಸಿದ್ದಾರೆ. 'ಸದಸದಾತ್ಮಕಂ' ಎಂಬುದಕ್ಕೆ ಸತ್ ಮತ್ತು ಅಸತ್ ಎರಡೂ ಆದವನು ಎಂದು ಆಪಾತತಃ ಅರ್ಥವು ತೋರುತ್ತದೆ. ಇದನ್ನು ಕಾರ್ಯಕಾರಣ ರೂಪವಾದ ಜಗತ್ತಿನ ಅಂತರ್ಯಾಮಿ ಎಂದು ವಿವರಿಸುತ್ತಾರೆ. ಸತ್ ಅಂದರೆ ಸಜ್ಜನರು ಅಸತ್ ಅಶುಭ ಜೀವರು ಆತ್ಮನ ಉದರದಲ್ಲಿ ಯಾರಿಗೆ ಇರುವರೋ ಆ ಪರಮಾತ್ಮನು ಎಂದು ವಿವರಿಸುತ್ತಾರೆ.

'ಪ್ರಜಾನಾಂ ಪತಯಃ ಏಕವಿಂಶತಿಃ' ಎಂಬುದನ್ನು ವಿವರಿಸುತ್ತ ೧೪ ಮನುಗಳಲ್ಲಿ ಸ್ವಾಯಂಭುವ ಮನು ವಿಷ್ಣು ಬಿಟ್ಟು ೧೨ ಮನುಗಳು ಒಂಭತ್ತು ಲೋಕಪಾಲಕರು ಹೀಗೆ ೨೧ ಸಂಖ್ಯೆಯನ್ನು ಹೊಂದಿಸುತ್ತಾರೆ.

'ರಹಸ್ಯಂ ತ್ರಿವಿಧಂ' ಎಂಬಲ್ಲಿ ದೇವರಹಸ್ಯ ವೇದರಹಸ್ಯ ಧರ್ಮ ರಹಸ್ಯಗಳನ್ನು ಎರಡು ರೀತಿಯಿಂದ ಹೊಂದಿಸುತ್ತ ಪ್ರಕೃತ ಮಹಾಭಾರತದ ಕಥೆಯಲ್ಲಿ ದ್ರೌಪದಿಯಲ್ಲಿ ಐದು ಜನ ಅಧಿಷ್ಠಾನವಿರುವುದು ದೇವರಹಸ್ಯ, ಕುಂತಿಗೆ ದೂರ್ವಾಸರು ಮಂತ್ರಗಳನ್ನು ಉಪದೇಶ ಮಾಡಿದ್ದು ವೇದರಹಸ್ಯ, ಮಹಾಭಾರತದಲ್ಲಿ ಸ್ತ್ರೀಯರು ಸಂತಾನಾರ್ಥವಾಗಿ ದೇವರ್ಷ್ಯಾದಿ ಪುರುಷಾಂತರ ಸಮಾಗಮ ಮಾಡಿದ್ದು ಧರ್ಮರಹಸ್ಯ ಎಂದು ವಿವರಿಸಿದ್ದಾರೆ.

ಹೀಗೆ ಶ್ರೀವಾದಿರಾಜರ ಲಾಕ್ಷಾಭರಣವು ಕೇವಲ ಮಹಾಭಾರತದ ಕೆಲವು ಶ್ಲೋಕಗಳ ಕೆಲವು ಪದಗಳಿಗೆ ಪದಪದಾರ್ಥ ಬರೆದ ವ್ಯಾಖ್ಯಾನವಲ್ಲ. ಹೊರತು ಮಹಾಭಾರತದ

ಕಥೆಯಲ್ಲಿಯ ಧರ್ಮಸೂಕ್ಷ್ಮಗಳು ಪ್ರಮೇಯಗಳು ಪೌರಾಣಿಕ ವಿವರಗಳು ಪರಮಾತ್ಮನ ಮಹಿಮೆ ಹೀಗೆ ಭಾಷಾತ್ರಯರಿಂದ ತಿಳಿದುಕೊಳ್ಳಬೇಕಾದ ವಿಷಯಗಳನ್ನು ವಿವರಿಸುವ ಶ್ರೇಷ್ಠ ಗ್ರಂಥ. ಅವರ ಯುಕ್ತಿಮಲ್ಲಿಕಾದಲ್ಲಿ ಅನೇಕ ವಿಷಯ ವಿಸ್ತಾರವಿರುವಂತೆ ಇಲ್ಲಿಯೂ ವಿಷಯ ವಿಸ್ತಾರವಿದೆ.

ಹೀಗೆ ಲಕ್ಷಾಲಂಕಾರವನ್ನು ಗಮನಿಸದೆ; ತಾತ್ಪರ್ಯನಿರ್ಣಯವನ್ನು ಅವಲೋಕಿಸದೆ ಅನುವಾದಗೊಂಡಿರುವ ಅನೇಕ ಪುಸ್ತಕಗಳು ಇವೆ. ಇವುಗಳಿಂದ ಭಾರತಾರ್ಥವು ಪೂರ್ಣವೇದ್ಯವಾಗದು. ಇದು ನಮಗೆ ಉಪಲಬ್ಧ ಇರುವ ಅನೇಕ ಮೂಲಪ್ರತಿಗಳು ಮತ್ತು ವ್ಯಾಖ್ಯಾನ ಗ್ರಂಥಗಳನ್ನು ಆಧರಿಸಿ ಲಕ್ಷಾಲಂಕಾರ ವ್ಯಾಖ್ಯಾನದ ಜೊತೆಗೆ ಆಯಾ ಅಧ್ಯಾಯಕ್ಕೆ ಸಂಬಂಧಿಸಿದ ಶ್ರೀಮದಾಚಾರ್ಯರ ತಾತ್ಪರ್ಯ ನಿರ್ಣಯದ ಭಾಗಗಳನ್ನು ಅದರ ಅನುವಾದವನ್ನೂ ಸೇರಿಸಿದ್ದೇವೆ. ಸಹೃದಯ ಜಿಜ್ಞಾಸು ಓದುಗರಿಗೆ ಈ ಗ್ರಂಥ ರಸಾಂಬುಧಿಯಲ್ಲಿ ಆನಂದಮಜ್ಜನೋತ್ಸವವು ನಿಯಮೇನ ನಡೆಯುತ್ತದೆ ಎಂಬುದು ನಮ್ಮ ಗ್ರಹಿಕೆ.

ನಮ್ಮ ಈ ಯೋಜನೆಯು ಪರಮಪೂಜ್ಯ ಪ್ರಾತಃಸ್ಮರಣೀಯರಾದ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರ ಪರಮಾನುಗ್ರಹದಿಂದ ಅವರ ಜನ್ಮಶತಮನೋತ್ಸವದ ಅಂಗವಾಗಿ ಹೊರಹೊಮ್ಮುತ್ತಿದೆ. ನಿತ್ಯವೂ ಇವರ ಅನುಗ್ರಹ ರಕ್ಷೆಯನ್ನು ಬಯಸುತ್ತೇವೆ.

ಇದರಂತೆ ನಮ್ಮ ಸಮಸ್ತ ಸತ್ಕರ್ಮಗಳಲ್ಲಿಯೂ ವಿಶೇಷವಾಗಿ ಬೆಂಬಲಿಸಿ ಪ್ರೋತ್ಸಾಹಿಸುವ ಪಂಚಮ ಪರ್ಯಾಯೋತ್ಸವವನ್ನು ಕೈಗೊಳ್ಳಲಿರುವ ಪರಮಪೂಜ್ಯ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶತೀರ್ಥರು ಉತ್ತಮವಾದ ಅನುಗ್ರಹ ಸಂದೇಶವನ್ನಿತ್ತು ಅನುಗ್ರಹಿಸಿದ್ದಾರೆ. ಗುರುಗಳಿಗೆ ಅನಂತ ಸಾಷ್ಟಾಂಗ ನಮಸ್ಕಾರ ಪೂರ್ವಕ ಕೃತಜ್ಞತೆಗಳು. ಪಲಿಮಾರು ಮಠಾಧೀಶರಾದ ಪರಮಪೂಜ್ಯ ಶ್ರೀ ಶ್ರೀ ವಿದ್ಯಾಧೀಶ ತೀರ್ಥ ಶ್ರೀಪಾದರು ಅನೇಕ ವರ್ಷಗಳಿಂದ ಈ ಕೃತಿರತ್ನವನ್ನು ಸಮಾಜಕ್ಕೆ ನೀಡಲು ಅವಿರತ ಶ್ರಮ ವಹಿಸಿರುತ್ತಾರೆ. ಈ ಭಾರತಗಂಗೆಯ ಭಾಗೀರಥರು ಶ್ರೀಪಾದರು, ನಿರ್ಮಲ ಜ್ಞಾನಗಂಗೆಯು ಪ್ರವಹಿಸಲೆಂದು ಒದಗಿ ಬಂದ ಅನೇಕ ವಿಘ್ನರಗಳ ಗುಡ್ಡೆಯನ್ನೇ ಛೇದಿಸಿದ್ದಾರೆ. ಇವರ ತಾಳ್ಮೆ-ಜಾಣ್ಮೆ-ಪರಿಶ್ರಮ-ಧನದ ವಿನಿಯೋಗ-ಪಂಡಿತ ಪೋಷಣೆ- ಪ್ರೋತ್ಸಹಗಳ ಪ್ರತೀಕವಾಗಿ ಈ ಕೃತಿಯು ಸಮಾಜದ ಸಜ್ಜನರ ಕೈ ತಲುಪುತ್ತಿದೆ. ಶ್ರೀಪಾದರಿಗೆ ಈ ಸತ್ಕರ್ಮದಲ್ಲಿ ತೊಡಗಿಸಿಕೊಂಡಿರುವ ನಾವೆಲ್ಲರೂ ಋಣಿಗಳಾಗಿದ್ದೇವೆ.

ಪರಮಪೂಜ್ಯ ಪಲಿಮಾರು ಶ್ರೀಪಾದರ ಯೋಜನೆಗೆ ವಿಶೇಷವಾದ ಪ್ರೋತ್ಸಾಹವನ್ನು ನೀಡುವುದರ ಜೊತೆಗೆ ಅನುಗ್ರಹ ಸಂದೇಶವನ್ನೂ ದಯಪಾಲಿಸಿದ ಅದಮಾರು

ಮಠಾಧೀಶರಾದ ಪರಮಪೂಜ್ಯ ಶ್ರೀ ಶ್ರೀ ವಿಶ್ವಪ್ರಿಯತೀರ್ಥಶ್ರೀಪಾದರಿಗೆ ಸಾಷ್ಟಾಂಗ ಪ್ರಣಾಮ ಪೂರ್ವಕ ಕೃತಜ್ಞತೆಗಳು.

ಇದರಂತೆ ಅನೇಕ ಮಠಾಧೀಶರು ಸಂಶೋಧನೆಗೆ ಬೇಕಾದ ಮೂಲ ಮಾತೃಕೆಗಳನ್ನು ಒದಗಿಸಿಕೊಟ್ಟು ಅನುಗ್ರಹಿಸಿರುತ್ತಾರೆ. ಎಲ್ಲ ಮಠಾಧೀಶರನ್ನೂ ಕೃತಜ್ಞತಾಪೂರ್ವಕ ನಮಿಸುತ್ತೇವೆ. ಪರಮಪೂಜ್ಯ ಸೋದೆ ಶ್ರೀವಾದಿರಾಜ ಮಠಾಧೀಶರಾದ ಶ್ರೀ ಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದರು ಲಕ್ಷಾಲಂಕಾರದ ಮೂಲ ಮಾತೃಕೆಗಳನ್ನು ಸಂಶೋಧನೆಗಾಗಿ ನೀಡಿ ಉಪಕರಿಸಿದ್ದಲ್ಲದೆ ಉತ್ತಮ ಅನುಗ್ರಹ ಸಂದೇಶವನ್ನಿತ್ತು ಅನುಗ್ರಹಿಸಿರುತ್ತಾರೆ. ಇವರಿಗೂ ನಮ್ಮ ಸಂಸತ್ತಿನ ವತಿಯಿಂದ ಸಾಷ್ಟಾಂಗ ನಮಸ್ಕಾರ ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ಮತ್ತು ಅದಮಾರು ಕಿರಿಯ ಮಠಾಧೀಶರಾದ ಶ್ರೀ ಶ್ರೀ ಈಶಪ್ರಿಯತೀರ್ಥ ಶ್ರೀಪಾದರು ಸಾಕಷ್ಟು ಪ್ರೋತ್ಸಾಹವನ್ನು ನೀಡಿದ್ದಾರೆ. ಇವರಿಗೂ ಸಾಷ್ಟಾಂಗ ಪ್ರಣಾಮ ಪೂರ್ವಕ ಕೃತಜ್ಞತೆಗಳು.

ಮಹಾಭಾರತ ಶ್ಲೋಕಗಳ ಅನುವಾದಕಾರ್ಯದಲ್ಲಿ ಅವಿರತ ಪರಿಶ್ರಮವನ್ನು ಪಟ್ಟಿರುವ ವಿದ್ವಾನ್ ಪಿ.ಎಸ್. ಶೇಷಗಿರಿ ಆಚಾರ್ಯರು ಅಭಿನಂದನಾರ್ಹರಾಗಿದ್ದಾರೆ. ಲಕ್ಷಾಲಂಕಾರದ ಹಿನ್ನೆಲೆಯಲ್ಲಿ ಸಮಗ್ರ ಆದಿಪರ್ವ ಸಭಾಪರ್ವಗಳನ್ನು ಅನುವಾದಿಸಿ ಕೊಟ್ಟಿದ್ದಾರೆ. ಗ್ರಂಥ ಸಂಶೋಧನೆಯಲ್ಲಿಯೇ ತೊಡಗಿಸಿಕೊಂಡಿರುವ ಇವರ ಅನೇಕ ಸತ್ಕರ್ಮರೂಪವಾದ ಕೃತಿಗಳು ಶ್ಲಾಘನೀಯವಾದದ್ದು.

ವಿದ್ವಾನ್ ಕೆ. ಹಯವದನ ಪುರಾಣಿಕರು ಮಾಡಿದ ತಾತ್ಪರ್ಯ ನಿರ್ಣಯದ ಅನುವಾದದ ಕೆಲವು ಭಾಗಗಳನ್ನು ಸೇರಿಸಿದ್ದೇವೆ. ಶ್ರೇಷ್ಠ ವಿದ್ವಾಂಸರಾದ ಇವರಿಗೂ ಸಂಸತ್ತಿನ ವತಿಯಿಂದ ಕೃತಜ್ಞತೆಗಳು. ಶ್ರೀ ಹೃಷೀಕೇಶತೀರ್ಥರು ಬರೆದ ಮಹಾಭಾರತ ತಾತ್ಪರ್ಯ ನಿರ್ಣಯದ ಶುದ್ಧಪಾಠವನ್ನು ಸಂಶೋಧಿಸಿ ಕೊಟ್ಟ ಉತ್ತಮ ಮಾರ್ಗದರ್ಶನವನ್ನು ನೀಡಿರುವ ವಿದ್ಯಾವಾಚಸ್ಪತಿ ಶ್ರೀ ಬನ್ನಂಜೆ ಗೋವಿಂದಾಚಾರ್ಯರಿಗೆ ನಮಸ್ಕಾರ ಪೂರ್ವಕ ಕೃತಜ್ಞತೆಗಳು.

ವಿದ್ವಾನ್ ಪಿ.ಎಸ್. ಶೇಷಗಿರಿ ಆಚಾರ್ಯರ ಅನುವಾದವನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಕೊಟ್ಟ ವಿದ್ವಾನ್ ಪಾಂಡುರಂಗ ಪಾಂಡುರಂಗಿಯವರಿಗೆ ಕೃತಜ್ಞತೆಗಳು.

ಮಹಾಭಾರತ ಬೃಹದ್ ಯೋಜನೆಯ ದೊಡ್ಡ ಜವಾಬ್ದಾರಿಯನ್ನು ತಲೆಗೇರಿಸಿಕೊಂಡು ಎಲ್ಲಾ ವಿದ್ವಾಂಸರನ್ನು ಸೇರಿಸಿ ಶ್ರೀಪಾದರಿಗೆ ಸಮ್ಮತವಾಗುವಂತೆ

ಯೋಜನೆಯನ್ನು ಕ್ರಮಬದ್ಧಗೊಳಿಸಿದ ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯರು ಅಭಿನಂದನೀಯರಾಗಿದ್ದಾರೆ. ಯೋಜನೆಗಾಗಿ ಅನೇಕವರ್ಷ ಯೋಚಿಸಿದ್ದಾರೆ; ಶ್ರಮವಹಿಸಿದ್ದಾರೆ. ಇವರ ಪರಿಶ್ರಮದ ಫಲವಾಗಿಯೂ ಈ ಕೃತಿಯು ಹೊರಹೊಮ್ಮಿದೆ. ಇವರಿಗೆ ಸಂಸತ್ತಿನ ವತಿಯಿಂದ ಕೃತಜ್ಞತೆಗಳು.

ಕೃತಿ ಪ್ರಕಾಶನಕ್ಕೆ ಅನೇಕ ಮಹನೀಯರು ಧನಸೇವೆಯನ್ನು ಸಲ್ಲಿಸಿದ್ದಾರೆ. ಉದಾರ ಹೃದಯದ ಸಜ್ಜನವರ್ಗಕ್ಕೆ ನಮ್ಮ ಕೃತಜ್ಞತೆಗಳು. ಪ್ರಕಾಶನಕ್ಕೆ ನಿತ್ಯ ಶ್ರಮವಹಿಸಿದ ವಿದ್ವಾನ್ ಗಿರೀಶಾಚಾರ್ಯ, ಶ್ರೀಯುತ ಸಿ. ಮುರಳೀ, ಬೆಂಗಳೂರು, ಶ್ರೀಯುತ ಕಿರಣ ರಾಘವೇಂದ್ರ, ಬೆಂಗಳೂರು, ಬಿ.ಎನ್. ಶ್ರೀಶ, ಹಾಗೂ ಕರಡುಪ್ರತಿಯನ್ನು ತಿದ್ದಲು ಸಹಕರಿಸಿದ ಮೈಸೂರಿನ ಅನೇಕ ಅಧ್ಯಾತ್ಮ ಬಂಧುಗಳು. ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ಸಂಸ್ಥೆಯ ವತಿಯಿಂದ ಕೃತಜ್ಞತೆಗಳು.

ಪ್ರಕಾಶಕರು
ತತ್ತ್ವಸಂಶೋಧನಸಂಸತ್, ಉಡುಪಿ.

# ಮಹಾಭಾರತದ ಮಹತ್ವ

ಮಹಾಭಾರತದ ಸ್ಥಾನಮಾನ ಅದ್ಭುತ ! ಯಾರಿಂದಲೂ ಊಹಿಸಲಾಗದಷ್ಟು ದೊಡ್ಡ ಕೃತಿ. ಈ ದೇಶದ ನೆಲದಲ್ಲಿ ಓಡಾಡುತ್ತಿರುವ ಪ್ರತಿಯೊಬ್ಬರ ನರನಾಡಿಗಳಲ್ಲಿ ಹರಿಯುತ್ತಿರುವ ಗ್ರಂಥವೆಂದರೆ ಅದು 'ಮಹಾಭಾರತ' ಮಾತ್ರ. ಪ್ರತಿಯೊಬ್ಬ ಭಾರತೀಯರ ಅವಿಭಾಜ್ಯ ಅಂಗ 'ಮಹಾಭಾರತ'. ಅಷ್ಟೇ ಅಲ್ಲದೇ ಭಾರತೀಯ ಸಂಸ್ಕೃತಿ, ಕಲೆ, ಶಿಲ್ಪಶಾಸ್ತ್ರ ಎಲ್ಲವೂ ಕೂಡ ನಮ್ಮ ದೇಶದಲ್ಲಿ ಪ್ರವಹಿಸುತ್ತಿರುವುದು ಮಹಾಭಾರತದ ಹಿನ್ನೆಲೆಯಲ್ಲಿ. ಮಹಾಭಾರತವು ಸಮಾಜದ ಎಲ್ಲ ಸ್ತರಗಳಲ್ಲಿಯೂ ತನ್ನ ಮಾರ್ಗದರ್ಶನದ ಅಚ್ಚೊತ್ತಿದೆ.

ಪ್ರಪಂಚದಲ್ಲಿ ಏನೇನು ಒಳಿತುಗಳು ಶುಭಕಾರ್ಯಗಳು ಕಾಣಿಸುತ್ತಿವೆಯೋ, ಆ ಎಲ್ಲಾ ಕಾರ್ಯಗಳಿಗೂ ಮಹಾಭಾರತವೇ ಆಕರ. ಮಹಾಭಾರತದಲ್ಲಿ ಇಲ್ಲದ್ದನ್ನು ಬೇರೆ ಎಲ್ಲಿಯೂ ನಾವು ಕಾಣಲಾರೆವು. ಬೇರೆ ಎಲ್ಲಿಯೇ ಕಂಡಿರುವುದೂ ಕೂಡ ಮಹಾಭಾರತದಲ್ಲಿಯೇ ಇದೆ. ಈ ಹೇಳಿಕೆ ಸಾರ್ವದೇಶಿಕ ಹಾಗೂ ಸಾರ್ವಕಾಲಿಕ.

'ಮಹಾಭಾರತ' ಎಂಬ ಒಂದು ಗ್ರಂಥವಿದ್ದರೆ ಎಲ್ಲವೂ ಇದ್ದಂತೆ. 'ಮಹಾಭಾರತ' ಎಂಬ ಒಂದು ಗ್ರಂಥ ಇಲ್ಲದಿದ್ದರೆ ಯಾವ ಗ್ರಂಥವೂ ಕೂಡ ಇಲ್ಲದಂತೆ. ಈ ಗ್ರಂಥವು ಸಾಗರಕ್ಕಿಂತಲೂ ಆಳ ಮತ್ತು ಗಂಭೀರ, ಆಕಾಶಕ್ಕಿಂತಲೂ ಎತ್ತರ ಮತ್ತು ವಿಶಾಲ.

ಪ್ರತಿಯೊಬ್ಬ ಭಾರತೀಯರಲ್ಲಿ ಹುದುಗಿರುವ ಧೈರ್ಯ, ಸ್ಥೈರ್ಯ, ಸಂಸ್ಕೃತಿ, ಪ್ರಜ್ಞೆ ಈ ಎಲ್ಲಾ ಗುಣಗಳನ್ನು ನೀಡಿರುವುದೇ ಮಹಾಭಾರತ. ಆದ್ದರಿಂದ ಅನೇಕ ರಾಜಕೀಯ ಅಲ್ಲೋಲ-ಕಲ್ಲೋಲಗಳು, ಶತ್ರುಗಳ ಆಕ್ರಮಣಗಳು, ನಾಸ್ತಿಕರ ಮಾನಸಿಕ ಹಿಂಸೆಗಳು ಇವೆಲ್ಲವೂ ನಮ್ಮ ದೇಶದಲ್ಲಿ ನಡೆದಿದ್ದರೂ ಅವೆಲ್ಲವನ್ನು ಎದುರಿಸಿ ಮಹಾಭಾರತ ಗ್ರಂಥವು ಅಚಲವಾಗಿ ನಿಂತಿದೆ. ಗಂಗೆಯಂತೆ ನಿರ್ಮಲವಾಗಿ ಪ್ರವಹಿಸುತ್ತಲೇ ಇದೆ. ಎಲ್ಲಿಯವರೆಗೆ ನಾವು ಮಹಾಭಾರತದಲ್ಲಿ ತಿಳಿಸಿರುವ ಪದ್ಧತಿಯನ್ನು ಅನುಸರಿಸುತ್ತಿರುತ್ತೇವೋ, ಅಲ್ಲಿಯ ತನಕವೂ ನಾವು ಕ್ಷೇಮವಾಗಿಯೇ ಇರುತ್ತೇವೆ. ಯಾವಾಗ ಮಹಾಭಾರತದಲ್ಲಿ ತಿಳಿಸಿರುವ ಪದ್ಧತಿಯನ್ನು ತಿರಸ್ಕರಿಸುತ್ತೇವೋ ಅಂದೇ ನಮ್ಮ ಅಧಃಪತನ ಪ್ರಾರಂಭ.

ನಮ್ಮ ಜೀವನದ ಕೆಲವು ಕಾಲದ ಅಲೆಗಳ ಮಧ್ಯದಲ್ಲಿ ಯಾವ ಕ್ಷಣಗಳಲ್ಲಿ ಮಹಾಭಾರತದ ಮಾರ್ಗದರ್ಶನದಿಂದ ನಾವು ದೂರವಾಗಿದ್ದೇವೋ, ಅಂದಿನ ದಿನಗಳೆಲ್ಲೆಲ್ಲಾ ಅನೇಕ ಕಷ್ಟ-ನಷ್ಟಗಳನ್ನೇ ಅನುಭವಿಸಿದ್ದೇವೆ. ಆದರೆ ನಮ್ಮ ಜೀವನದಲ್ಲಿ ಯಾವ ಕ್ಷಣಗಳನ್ನು ಮಹಾಭಾರತದ ಮಾರ್ಗದರ್ಶನದಲ್ಲಿ ಪುರಾತನ ಸಂಸ್ಕೃತಿಯ

ಹಿನ್ನೆಲೆಯಲ್ಲಿ ಪ್ರಾಮಾಣಿಕವಾಗಿ ಪರೋಪಕಾರಕ್ಕಾಗಿ ದೇವರ ಸೇವೆಗಾಗಿ ಮುಡಿಪಾಗಿಟ್ಟದ್ದೇವೋ, ಅಂದಿನ ಕ್ಷಣಗಳೆಲ್ಲವೂ ಅತ್ಯಂತ ಶಾಂತಿದಾಯಕವಾಗಿವೆ.

ಅನೇಕ ಮಹಾತ್ಮರು ಅನೇಕ ಬಾರಿ ಜನಿಸಿ, ನಮ್ಮನ್ನು ತಪ್ಪುದಾರಿಯಿಂದ ಸುಗಮದಾರಿಗೆ' ತಂದು ರಕ್ಷಿಸುತ್ತಿರುತ್ತಾರೆಂಬ ಧೈರ್ಯವನ್ನು ನೀಡುವ ಗ್ರಂಥವೇ ಮಹಾಭಾರತ.

''ಎಚ್ಚರದಿಂದ ಇರು ! ಮಹಾಭಾರತ ತಿಳಿಸುವ ಹಾದಿಯಲ್ಲಿ ಸಂಚರಿಸು. ಅದೇ ಭಾರತದ ಜೀವನಾಡಿ'' ಎಂಬ ಕನ್ನಡದ ನಾಣ್ನುಡಿ ಮೂರುಕಾಲಗಳಲ್ಲಿಯೂ ಸತ್ಯವಾದದ್ದು.

ನಾವು ಬಾಲ್ಯದಲ್ಲಿ ಮಹಾಭಾರತದ ಧೀರನಾಯಕರ ಮತ್ತು ಸಾಧ್ವಿಶಿರೋಮಣಿಗಳಾದ ವನಿತೆಯರ ಕಥೆಗಳನ್ನೆಲ್ಲಾ ಜೀವನಗಾನದ ಜೋಗುಳದಲ್ಲಿ ನಿದ್ರಿಸಿ ಬೆಳೆದಿದ್ದೇವೆ. ಪುನಃ ತಾರುಣ್ಯದಲ್ಲಿ ಮಹಾಭಾರತದ ಹೊಸ-ಹೊಸ ವಿಚಾರಗಳನ್ನು ಮನಗಾಣುತ್ತಾ, ಬಾಲ್ಯದಲ್ಲಿ ಕೇಳಿದ ಕಥೆಗಳನ್ನು ಮೆಲುಕುಹಾಕುತ್ತಾ ಜೀವನರಥದಲ್ಲಿ ಸಾಗುತ್ತಿದ್ದೇವೆ. ಪುನಃ ವೃದ್ಧಾಪ್ಯದ ಅವಸ್ಥೆಯಲ್ಲಿ ಮಹಾಭಾರತದ ಮಾರ್ಗದೀವಿಗೆಯಂತೆ ಮೋಕ್ಷಮಾರ್ಗಕ್ಕಾಗಿ ದಾರಿಹಿಡಿಯುತ್ತೇವೆ. ಹೀಗೆ ಮಹಾಭಾರತವು ಹುಟ್ಟಿನಿಂದ ಅಂತ್ಯದವರೆಗೂ ನಮ್ಮನ್ನು ಎಲ್ಲ ರೀತಿಯಲ್ಲಿಯೂ ನಿರ್ದೇಶಿಸುತ್ತಾ, ರಕ್ಷಿಸುತ್ತಾ ನಮ್ಮೆಲ್ಲರ ಲಕ್ಷೋಪಲಕ್ಷ ಸಂಖ್ಯೆಯ ಜೀವನಗಳನ್ನೇ ನಿರ್ವಹಿಸುತ್ತಿದೆ.

ಈ ಭಾರತದೇಶದಲ್ಲಿ ಹುಟ್ಟಿ ಯಾವ ನಮ್ಮ ಹಿರಿಯರು ಯಾವ ಗ್ರಂಥದಿಂದ ಧೀರೋದಾತ್ತ ವ್ಯಕ್ತಿಗಳಾಗಿ ಬೆಳೆದರೋ, ಅಂತಹ ಮಹಾಭಾರತವನ್ನು ನಾವು ಹೆಮ್ಮೆಯಿಂದ ಕಾಣಲೇಬೇಕು. ಇದು ಸಾರ್ವಕಾಲಿಕವಾದ ಶ್ರೇಷ್ಠಗ್ರಂಥ. ಇದಕ್ಕೆ ಸರಿಸಾಟಿಯಾದ ಗ್ರಂಥ ಇದುವರೆಗೂ ರಚನೆಯಾಗಿರುವುದಿಲ್ಲ. ಮುಂದೆಯೂ ಕೂಡ ಪ್ರಪಂಚದ ಯಾವ ಮೂಲೆಮೂಲೆಯಲ್ಲಿಯೂ ರಚನೆಯಾಗುವ ಸಾಧ್ಯತೆಯೂ ಇಲ್ಲ. ಇದೊಂದು ಶ್ರೇಷ್ಠವಾದ ಇತಿಹಾಸ ಗ್ರಂಥ.

ಬೇರೆ ಯಾವುದೋ ಗ್ರಂಥವನ್ನು ನಾವು ಓದುವಾಗ ಬೇಸರ ಎನಿಸಬಹುದು. ಆದರೆ ಮಹಾಭಾರತ ಗ್ರಂಥವನ್ನು ಓದುವವರಿಗೆ ಎಂದೂ ಸಹ ಬೇಸರವುಂಟಾಗಲು ಸಾಧ್ಯವೇ ಇಲ್ಲ. ಹಾಗೇನಾದರೂ ಮಹಾಭಾರತದಿಂದ ಬೇಸರವಾಯಿತೆಂದರೆ ತನ್ನ ಜೀವನದಲ್ಲಿಯೇ ತಾನು ಬೇಸರ ಪಟ್ಟಿದ್ದಾನೆಂದರ್ಥ. ಪ್ರತಿಯೊಬ್ಬರಿಗೂ ಅತ್ಯಂತ ಉತ್ಸಾಹವನ್ನು ನೀಡಿ ಸನ್ಮಾರ್ಗದಲ್ಲಿ ಕರೆದುಕೊಂಡು ಹೋಗುವ ಏಕೈಕ ಕೃತಿಯೆಂದರೆ 'ಮಹಾಭಾರತ' ಮಾತ್ರ.

ನಮ್ಮ ಭಾರತದೇಶದಲ್ಲಿ ಪಾಶ್ಚಾತ್ಯಸಂಸ್ಕೃತಿ ಹೆಚ್ಚುತ್ತಾ ಹೆಚ್ಚುತ್ತಾ ಮಹಾಭಾರತವು ನೀಡಿರುವ ಸಂಸ್ಕೃತಿಯು ನಶಿಸಿಹೋಗುವ ಕಾಲವು ಹತ್ತಿರವಾಗುತ್ತಿದೆ. ಇಂತಹ ತುರ್ತುಪರಿಸ್ಥಿತಿಯಲ್ಲಿ ನಾವು ಮಹಾಭಾರತ ಗ್ರಂಥವನ್ನು ಉಳಿಸಬೇಕು, ಬೆಳೆಸಬೇಕು, ಪ್ರಚಾರ ಮಾಡಬೇಕು. ಅದಕ್ಕಾಗಿ ಜೀವನವನ್ನೇ ಅರ್ಪಣೆ ಮಾಡಬೇಕು. ಹೀಗೆ ಮಾಡದೆ ನಾವೇನಾದರೂ ಉದಾಸೀನ ಮಾಡಿದರೆ ಮುಂದೊಂದು ದಿವಸ ಎಂದೂ ಕೂಡ ಮರಳಿಬಾರದ ಪ್ರಪಾತದಲ್ಲಿ ಬಿದ್ದುಬಿಡುತ್ತೇವೆ; ಇದು ಖಚಿತ.

ಪಾಶ್ಚಾತ್ಯದೇಶದವರು ನಮ್ಮ ಭಾರತದೇಶದಲ್ಲಿ ಅನಕ್ಷರಸ್ಥರ ಸಂಖ್ಯೆ ಬಹಳ ಮಿಗಿಲಾಗಿದೆಯೆಂದು ತೆಗಳಬಹುದು. ಆದರೆ ಸಾಕ್ಷರತಾರಹಿತರಾಗಿದ್ದರೂ ಭಾರತೀಯಮಕ್ಕಳಲ್ಲಿ, ಯುವಕರಲ್ಲಿ, ವೃದ್ಧರಲ್ಲಿ, ಸ್ತ್ರೀಯರಲ್ಲಿ ಎಲ್ಲರಲ್ಲಿಯೂ ಈ ಮಹಾಭಾರತದ ಗುಣಗಳ ಪ್ರಭಾವವಿದೆ, ಉತ್ತಮ ಗುಣಗಳಿವೆ, ಧಾರ್ಮಿಕ ಹಾಗೂ ಲೌಕಿಕ ಕಾರ್ಯಗಳಲ್ಲಿ ಶ್ರದ್ಧಾಳುಗಳಾಗಿ ಬಾಳಿ ಬೆಳಗುತ್ತಿದ್ದಾರೆ. ಈ ಅಧ್ಯಾತ್ಮಶ್ರೇಷ್ಠತೆ ಬೇರೆ ಇನ್ನ್ಯಾವ ದೇಶದಲ್ಲಿ ಹರಿದು ಬರಲು ಸಾಧ್ಯ ? ನಮ್ಮ ಸಮಾಜದ ಸಾಕ್ಷರತೆ ಎಂದರೆ ಇದೇ ಹೊರತು ಬೇರೆ ಯಾವುದೂ ಅಲ್ಲ.

ಯಾರು ಸಾಕ್ಷರರು ಯಾರು ನಿರಕ್ಷರು ? ಯಾರು ಸುಂದರ ಯಾರು ಸುಂದರರಲ್ಲ ? ಯಾವುದು ಶ್ರೇಷ್ಠ ? ಯಾವುದು ಕನಿಷ್ಠ ? ಯಾವುದು ಶುಭ ಯಾವುದು ಅಶುಭ ? ಯಾವುದು ಸರಿ ಯಾವುದು ತಪ್ಪು ? ಎಂಬ ಗಹನವಾದ ಗಂಭೀರವಾದ ಪ್ರಶ್ನೆಗಳಿಗೆಲ್ಲಾ ಉತ್ತರ ಸಿಗುವುದು ಮಹಾಭಾರತದಲ್ಲಿ ಮಾತ್ರ. ಈ ಎಲ್ಲಾ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ತಿಳಿದವರು ಭಾರತದೇಶದಲ್ಲಿ ಹುಟ್ಟಿದವರು ಮಾತ್ರ. ಒಂದುವೇಳೆ ಮಹಾಭಾರತವನ್ನು ಓದದಿದ್ದರೆ ಮೇಲಿನ ಯಾವ ಪ್ರಶ್ನೆಗಳಿಗೂ ಉತ್ತರ ಕೊಡಲು ಯಾರಿಂದಲೂ ಸಾಧ್ಯವಿಲ್ಲ.

ಇಂತಹ ಶ್ರೇಷ್ಠವಾದ ಮಹಾಭಾರತ ಗ್ರಂಥವನ್ನು ಮಹಾವಿಷ್ಣುವೇ ಸಾಕ್ಷಾತ್ ವೇದವ್ಯಾಸದೇವರಾಗಿ ಅವತರಿಸಿ ರಚಿಸಿದ್ದಾನೆ. ಇಂತಹ ಶ್ರೇಷ್ಠವಾದ ಗ್ರಂಥಕ್ಕೆ ಸರಿಸಾಟಿಯಾದ ಗ್ರಂಥ ಮುಂದೆ ಎಂದೂ ಕೂಡ ನಿರ್ಮಾಣವಾಗಲು ಸಾಧ್ಯವಿಲ್ಲ, ವೇದವ್ಯಾಸರಂತಹ ಕರ್ತೃಗಳು ಹುಟ್ಟಲೂ ಕೂಡ ಸಾಧ್ಯವಿಲ್ಲ.

ಈ ಎಲ್ಲಾ ಕಾರಣಗಳಿಂದ ಮಹಾಭಾರತಕ್ಕೆ 'ಪಂಚಮವೇದ' ಎಂಬ ಬಿರುದು ಪ್ರಾಪ್ತವಾಗಿದೆ. 'ಭಾರತಃ ಪಂಚಮೋ ವೇದಃ' ಈ ಮಹಾಭಾರತದಂಥ ಗ್ರಂಥಕ್ಕೆ ಗಾತ್ರದಲ್ಲಿ ಮತ್ತು ವಿಚಾರದಲ್ಲಿ ಸರಿಸಾಟಿಯಾದ ಕೃತಿ ಹುಟ್ಟಿಂದಿಲ್ಲ. 'ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ ಕ್ವಚಿತ್' ಎಂಬ ಹೊಗಳಿಕೆ ಇದರ ಮಹತ್ವವನ್ನು ತಿಳಿಸುತ್ತದೆ.

ಸಮಸ್ತ ಪ್ರಪಂಚದ ಮನೋವಿಜ್ಞಾನಿಗಳೆಲ್ಲರೂ ಯಾವ ಗ್ರಂಥದಿಂದ ಆಶ್ಚರ್ಯಕರವಾದ ವಿಷಯಗಳನ್ನೆಲ್ಲಾ ತಿಳಿದು ಅದನ್ನೇ ಅನುಸರಿಸುತ್ತಿದ್ದಾರೋ, ಅಂತಹ ಶ್ರೇಷ್ಠವಾದ ವಿಶ್ವಮಾನ್ಯವಾದ 'ಭಗವದ್ಗೀತೆ' ಉದಿಸಿರುವುದು ಈ ಮಹಾಭಾರತದಿಂದಲೇ. ಈ ಮಹಾಭಾರತ ಗ್ರಂಥವನ್ನು ಪ್ರಶಂಸೆ ಮಾಡದ ವಿದ್ವಾಂಸರಿಲ್ಲ. ಪ್ರಶಂಸೆ ಮಾಡದ ಕೃತಿಗಳಿಲ್ಲ. ಅಷ್ಟೇ ಏಕೆ ಸಾಕ್ಷಾತ್ ವೇದವ್ಯಾಸದೇವರೇ ಹದಿನೆಂಟು ಪುರಾಣಗಳಲ್ಲಿಯೂ ಕೂಡ, ಅನೇಕ ಸ್ಮೃತಿಗ್ರಂಥಗಳಲ್ಲಿಯೂ ಕೂಡ ಮಹಾಭಾರತ ಗ್ರಂಥವನ್ನು ಮುಕ್ತಕಂಠದಿಂದ ಹಾಡಿಕೊಂಡಾಡಿದ್ದಾರೆ.

ಮಹಾಭಾರತವು ಕೇವಲ ದಾಯಾದಿಗಳ ಆಸ್ತಿಯ ಕಲಹವನ್ನು ನಿರೂಪಿಸುವ ಕೃತಿಯಲ್ಲ. ಅದು ಧರ್ಮ-ಅಧರ್ಮಗಳ, ನ್ಯಾಯ-ಅನ್ಯಾಯಗಳ, ಸ್ವಾರ್ಥ-ಪರೋಪಕಾರಗಳ, ವಿಷಯಾಸಕ್ತಿ-ಭಗವಂತನಲ್ಲಿ ಆಸಕ್ತಿ ಇವೆಲ್ಲದರ ನಡುವಿನ ಸಂಘರ್ಷದಲ್ಲಿ 'ಯತೋ ಧರ್ಮ ತತೋ ಜಯಃ' ಧರ್ಮವೇ ಜಯಶಾಲಿ-ಯಾಗುವುದು ಎಂಬ ಧರ್ಮದ ಜಯವನ್ನು ಪ್ರತಿಬಿಂಬಿಸುವ ಅಪೂರ್ವವಾದ ಇತಿಹಾಸ ಗ್ರಂಥ.

ಇವೆಲ್ಲದಕ್ಕಿಂತ ಹೆಚ್ಚಾಗಿ ಪ್ರತಿಯೊಬ್ಬರೂ ಗಮನಿಸಲೇಬೇಕಾದ ಮತ್ತೊಂದು ಬಹಳ ಮುಖ್ಯವಾದ ವಿಚಾರವಿದೆ. ಈ ಮುಖ್ಯ ವಿಚಾರವನ್ನು ತಿಳಿಯದೇ ಉಳಿದ ಎಲ್ಲಾ ವಿಚಾರವನ್ನು ಮಹಾಭಾರತದಿಂದ ತಿಳಿಯುವುದರಿಂದ ಪರಮಲಾಭವು ಸರ್ವಥಾ ಆಗುವುದಿಲ್ಲ. ಮಹಾಭಾರತದಿಂದ ಮುಖ್ಯವಾಗಿ ತಿಳಿಯಬೇಕಾದ ಶ್ರೇಷ್ಠ ಪ್ರಧಾನವಿಚಾರವನ್ನು ಘಂಟಾಘೋಷವಾಗಿ ಸಾರಿದವರು ಶ್ರೀಮನ್ಮಧ್ವಾಚಾರ್ಯರು ಮಾತ್ರ. ಅದು ಹೀಗಿದೆ -

**ವಾಸುದೇವಸ್ಯ ಮಹಿಮಾ ಭಾರತೇ ನಿರ್ಣಯೋದಿತಃ ।**
**ತದರ್ಥಾಸ್ತು ಕಥಾಃ ಸರ್ವಾಃ ನಾನ್ಯರ್ಥಂ ವೈಷ್ಣವಂ ವಚಃ ॥**

ಭಗವಂತನಾದ, ದೇವದೇವೋತ್ತಮನಾದ, ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕನಾದ ವಾಸುದೇವನ ಸ್ವಾತಂತ್ರ್ಯವನ್ನು ನಿರ್ಣಯಿಸುವುದಕ್ಕಾಗಿಯೇ ಈ ಮಹಾಭಾರತಗ್ರಂಥವು ಹೊರಟಿದೆ. ಇದರ ನಿರ್ಣಯಕ್ಕಾಗಿಯೇ ಸಾವಿರಾರು ಉಪಾಖ್ಯಾನಗಳು ಮಹಾಭಾರತದಲ್ಲಿ ಹೆಣೆದುಕೊಂಡಿದೆ. 'ವಿಷ್ಣುವೇ ಸರ್ವೋತ್ತಮ' ಎಂಬ ತತ್ವವನ್ನು ಬಿಟ್ಟು, ಬೇರೆ ಯಾವ ವಿಚಾರವನ್ನೂ ಕೂಡ ಮುಖ್ಯಗುರಿಯನ್ನಾಗಿ ಪ್ರತಿಪಾದಿಸಲು ಈ ಗ್ರಂಥ ಹೊರಟಿರುವುದಿಲ್ಲ.

ಇಂತಹ ಶ್ರೇಷ್ಠವಾದ ಪರಮತತ್ವವನ್ನು ಸಾರಿ ಹೇಳಲು ಹೊರಟಿರುವ ಗ್ರಂಥದಿಂದ ಅಲ್ಪವಾದ ಜೀವನತತ್ವಗಳನ್ನಷ್ಟೇ ತಿಳಿದುಕೊಂಡು ಕೃತಕೃತ್ಯನಾಗುವ ವ್ಯಕ್ತಿ ಮೂರ್ಖನಾಗುತ್ತಾನೆ ಈ ವಿಷಯದಲ್ಲಿ ಯಾವ ಸಂಶಯವೂ ಇಲ್ಲ.

## ಎಂಟೇ ಅಕ್ಷರಗಳಲ್ಲಿ ಮಹಾಭಾರತ ವರ್ಣನೆ

ಹಗಲಿನ ಶ್ರಮವನ್ನು ಪರಿಹರಿಸಿ ಒಳಗಣ್ಣನ್ನು ತೆರೆಸುವ ಸಂಜೆಯ ಪಶ್ಚಿಮದ ಸೂರ್ಯ. ಇಂತಹ ಮುಸ್ಸಂಜೆಯ ಕಾಲದಲ್ಲಿ ಒಬ್ಬ ಕವಿ ಸವಾಲೊಡ್ಡುತ್ತಾನೆ. ೧. ಒಂದೆಡೆ ತೋಟದಲ್ಲಿ ಸಿಹಿರಸವನ್ನು ತುಂಬಿಕೊಂಡಿರುವ ಕಬ್ಬಿನ ರಾಶಿ, ೨. ಮತ್ತೊಂದೆಡೆ ದಿಗಂತದಲ್ಲಿ ಕಣ್ಣುಹಾಯಿಸಿದಾಗ ರಾಶಿರಾಶಿ ನೀರಿರುವ ಸಮುದ್ರ. ೩. ಮತ್ತೊಂದುಕಡೆ ರಾಶಿರಾಶಿ ಚಿಂತನೆಗಳ ಪ್ರವಾಹವಿರುವ ಮಹಾಭಾರತ ಗ್ರಂಥ. ಒಂದೇ ಸಾಲಿನ ಎಂಟು ಅಕ್ಷರಗಳಲ್ಲಿ ಈ ಮೂರನ್ನೂ ಕೂಡ ವರ್ಣನೆ ಮಾಡಬೇಕು ಎಂದು.

ಭಾರತಂ ಚ ಇಕ್ಷುದಂಡಂ ಚ ಸಮುದ್ರಂ ಚಾಪಿ ವರ್ಣಯ ಶ್ಲೋಕೇನೈಕೇನ ಪಾದೇನ ...............

ಈ ಸವಾಲಿಗೆ ಮತ್ತೊಬ್ಬ ಕವಿ ಅತ್ಯಂತ ಚಮತ್ಕಾರದಲ್ಲಿ ಉತ್ತರಿಸುತ್ತಾ ಎಂಟು ಅಕ್ಷರಗಳಿರುವ ಶ್ಲೋಕದ ಒಂದೇ ಪಾದದಿಂದಲೇ ಮೂರು ಪದಾರ್ಥಗಳನ್ನು ಅದ್ಭುತವಾಗಿ ವರ್ಣಿಸುತ್ತಾ ಶ್ಲೋಕವನ್ನು ಪೂರ್ಣ ಮಾಡುತ್ತಾನೆ.

## ಪ್ರತಿಪರ್ವ ರಸೋದಯಃ

೧. ಸಮುದ್ರವು ಪ್ರತೀಪರ್ವಕಾಲಗಳಲ್ಲಿ ತನ್ನ ಆರ್ಭಟದ ತೆರೆಗಳನ್ನು ಹೆಚ್ಚಿಸುತ್ತದೆ.

೨. ಕಬ್ಬಿನ ಜಲ್ಲೆಯು ಪ್ರತಿಯೊಂದು ಗಂಟಿನಲ್ಲಿಯೂ ರಸವನ್ನು ತುಂಬಿಕೊಂಡಿರುತ್ತದೆ.

೩. ಮಹಾಭಾರತವು ಪ್ರತಿಯೊಂದು ಪರ್ವಗಳಲ್ಲಿಯೂ ಕಾವ್ಯರಸವನ್ನು ತುಂಬಿಕೊಂಡಿದೆ.

ಮಹಾಭಾರತವು ನವರಸಭರಿತವಾದ ಮಹಾಕಾವ್ಯ. ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಭೀಭತ್ಸ, ರೌದ್ರ, ಶಾಂತ ಎಂಬ ಒಂಭತ್ತು ರಸಗಳು ಆಯಾ ಸ್ಥಾನಗಳಲ್ಲಿ ಅತ್ಯಂತ ಉಚಿತವಾಗಿ ತುಂಬಿಕೊಂಡಿದೆ.

## ಮಹಾಭಾರತದಿಂದ ದೊರೆಯುವ ಲಾಭ

**ಹ್ರದಾನಾಮುದಧಿಃ ಶ್ರೇಷ್ಠೋ ಗೌರ್ವರಿಷ್ಠಾ ಚತುಷ್ಪದಾಮ್ ।**
**ಯಥೈತಾನಿ ವಿಶಿಷ್ಟಾನಿ ತಥಾ ಭಾರತಮುಚ್ಯತೇ ॥**

ಎಲ್ಲ ಸರೋವರಗಳಿಗಿಂತಲೂ ಸಮುದ್ರವು ಶ್ರೇಷ್ಠವಾದುದು. ಎಲ್ಲ ಚತುಷ್ಪಾದ ಪ್ರಾಣಿಗಳಿಗಿಂತಲೂ ಗೋವು ಶೇಷ್ಠವಾದುದು ಹೇಗೆಯೋ ಹಾಗೆ ಪ್ರಮೇಯವನ್ನು ನಿರೂಪಿಸುವ ಎಲ್ಲ ಗ್ರಂಥಗಳಲ್ಲಿ ಭಾರತವು ಶ್ರೇಷ್ಠವಾದುದು.

ಯಶ್ಚೇದಂ ಶ್ರಾವಯೇಚ್ಛ್ರಾದ್ಧೇ ಬ್ರಾಹ್ಮಣಾನ್ ಪಾದಮಂತತಃ ।
ಅಕ್ಷಯ್ಯಮನ್ನದಾನಂ ತತ್ ಪಿತೄಂಸ್ತಸ್ಯೋಪತಿಷ್ಠತಿ ॥

ಶ್ರಾದ್ಧಕಾಲದಲ್ಲಿ ಬ್ರಾಹ್ಮಣರಿಗೆ ಯಾವನು ಕೊನೆಯಪಕ್ಷ ಈ ಭಾರತದ ಒಂದು ಪಾದವನ್ನಾದರೂ ಶ್ರವಣ ಮಾಡಿಸುತ್ತಾನೆಯೋ ಅವನು ಪಿತೃಗಳಿಗೆ ಮಾಡಿದ ಅನ್ನದಾನವು ಅಕ್ಷಯವಾಗಿ ಅದು ಪಿತೃಗಳನ್ನು ತಲಪುತ್ತದೆ.

ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।
ಬಿಭೇತ್ಯಲ್ಪಶ್ರುತಾದ್ ವೇದೋ ಮಾಮಯಂ ಪ್ರಚಲಿಷ್ಯತಿ ॥

ಇತಿಹಾಸ ಪುರಾಣಗಳಿಂದ ವೇದದ ಅರ್ಥವನ್ನು ವಿಸ್ತಾರಮಾಡಿ ತಿಳಿಯಬೇಕು. ಅಲ್ಪವಿದ್ಯೆಯುಳ್ಳ ಮನುಷ್ಯನು ವೇದದ ವ್ಯಾಖ್ಯಾನವನ್ನು ಮಾಡಲು ಹೊರಟರೆ ನನಗೆ ಇವನು ಅಪಾರ್ಥವನ್ನು ಮಾಡುತ್ತಾನೆ ಎಂದು ವೇದವು ಹೆದರುತ್ತದೆ.

ಕಾರ್ಷ್ಣಂ ವೇದಮಿಮಂ ವಿದ್ವಾನ್ ಶ್ರಾವಯಿತ್ವಾಽರ್ಥಮಶ್ನುತೇ ।
ಭ್ರೂಣಹತ್ಯಾಕೃತಂ ಚಾಪಿ ಪಾಪಂ ಜಹ್ಯಾನ್ನ ಸಂಶಯಃ ॥

ಈ ಮಹಾಭಾರತವು ವೇದವ್ಯಾಸರು ರಚಿಸಿದ ಪಂಚಮವೇದ. ಇದರ ವ್ಯಾಖ್ಯಾನವನ್ನು ಮಾಡಿದರೆ ಎಲ್ಲಾ ಪುರುಷಾರ್ಥಗಳ ಪ್ರಾಪ್ತಿಯಾಗುತ್ತದೆ. ಭ್ರೂಣಹತ್ಯೆಯನ್ನು ಮಾಡಿದ ಪಾಪವೂ ಕೂಡ ಇದರಿಂದ ಪರಿಹಾರವಾಗುತ್ತದೆ ಎಂಬ ವಿಷಯದಲ್ಲಿ ಸಂಶಯವಿಲ್ಲ.

ಯಶ್ಚೇದಂ ಶೃಣುಯಾನ್ನಿತ್ಯಮಾರ್ಷಂ ಶ್ರದ್ಧಾಸಮನ್ವಿತಃ ।
ಸ ದೀರ್ಘಮಾಯುರ್ದೀರ್ಘಾಂ ಚ ಸ್ವರ್ಗತಿಂ ಚಾಪ್ನುಯಾನ್ನರಃ ॥

ಪರಮಮಹರ್ಷಿಗಳಾದ ವೇದವ್ಯಾಸರಿಂದ ರಚಿತವಾದ ಈ ಭಾರತವನ್ನು ಯಾವನು ಶ್ರದ್ಧೆಯಿಂದ ಕೇಳುತ್ತಾನೆಯೋ ಅವನು ದೀರ್ಘವಾದ ಆಯುಷ್ಯವನ್ನೂ ಮತ್ತು ದೀರ್ಘಕಾಲದ ಸ್ವರ್ಗವಾಸವನ್ನೂ ಹೊಂದುತ್ತಾನೆ.

ಚತ್ವಾರ ಏಕತೋ ವೇದಾ ಭಾರತಂ ಚೈಕಮೇಕತಃ ।
ಸಮಾಗತೈಃ ಸುರರ್ಷಿಭಿಸ್ತುಲಾಮಾರೋಪಿತಂ ಪುರಾ ॥

ದೇವತೆಗಳು ಮತ್ತು ಋಷಿಗಳೆಲ್ಲರೂ ಒಂದು ಕಡೆ ಸೇರಿ ಒಂದು ತಕ್ಕಡಿಯಲ್ಲಿ ಒಂದು ಕಡೆ ನಾಲ್ಕುವೇದಗಳನ್ನೂ ಇನ್ನೊಂದು ಕಡೆ ಭಾರತವನ್ನೂ ಇಟ್ಟು ತೂಗಿದರು.

**ಮಹತ್ತ್ವೇಚ ಗುರುತ್ವೇಚ ಧ್ರಿಯಮಾಣಂ ತತೋಽಧಿಕಮ್ ।**
**ಮಹತ್ತ್ವಾದ್ ಭಾರವತ್ತ್ವಾಚ್ಚ ಮಹಾಭಾರತಮುಚ್ಯತೇ ।**
**ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃಪ್ರಮುಚ್ಯತೇ ॥**

ಮಹಾಭಾರತವಿದ್ದ ತಕ್ಕಡಿಯ ತಟ್ಟೆಯು ಗಾತ್ರದಿಂದ ಮತ್ತು ಭಾರದಿಂದ ಕೆಳಗೆ ಹೋಯಿತು. ಗಾತ್ರದಲ್ಲಿ ಮಹತ್ತಾಗಿರುವುದರಿಂದ ಮತ್ತು ಅರ್ಥದಿಂದ ಭಾರವಾಗಿರು-ವುದರಿಂದ ಇದನ್ನು ಮಹಾಭಾರತ ಎಂದು ಕರೆಯುತ್ತಾರೆ. ಮಹಾಭಾರತ ಶಬ್ದದ ಅರ್ಥವನ್ನು ಯಾವನು ತಿಳಿಯುತ್ತಾನೋ ಅವನು ಎಲ್ಲಾ ಪಾಪಗಳಿಂದಲೂ ಮುಕ್ತನಾಗುತ್ತಾನೆ.

**ತಪೋನ ಕಲ್ಕೋಽಧ್ಯಯನಂ ನ ಕಲ್ಕಃ**
**ಸ್ವಾಭಾವಿಕೋ ವೇದವಿಧಿರ್ನ ಕಲ್ಕಃ ।**
**ಪ್ರಸಹ್ಯ ವಿತ್ತಾಹರಣಂ ನ ಕಲ್ಕ-**
**ಸ್ತಾನ್ಯೇವ ಭಾವೋಪಹತಾನಿ ಕಲ್ಕಃ ॥**

ತಪಸ್ಸು ಕೆಟ್ಟದ್ದಲ್ಲ, ಅಧ್ಯಯನವು ಕೆಟ್ಟದ್ದಲ್ಲ, ಸ್ವಭಾವವನ್ನು ಅನುಸರಿಸಿದ ವೇದವಿಧಿಗಳು ಕೆಟ್ಟದ್ದಲ್ಲ, ರಾಜರು ಪ್ರಜೆಗಳಿಂದ ಬಲಾತ್ಕಾರಮಾಡಿ ಯೋಗ್ಯವಾದ ಧನವನ್ನು ಸ್ವೀಕರಿಸುವುದು ಕೆಟ್ಟದ್ದಲ್ಲ, ಆದರೆ ಉದ್ದೇಶವು ದುಷ್ಟವಾದರೆ ಮಾತ್ರ ಇದೆಲ್ಲವೂ ಕೆಟ್ಟದ್ದಾಗುತ್ತದೆ.

ಯೋ ವಿದ್ಯಾಚ್ಚತುರೋ ವೇದಾನ್ ಸಾಂಗೋಪನಿಷದೋ ದ್ವಿಜಃ ।
ನ ಚಾಖ್ಯಾನಮಿದಂ ವಿದ್ಯಾನ್ನೈವ ಸ ಸ್ಯಾದ್ ವಿಚಕ್ಷಣಃ ॥

ಯಾವ ಬ್ರಾಹ್ಮಣನು ನಾಲ್ಕು ವೇದಗಳನ್ನು, ವೇದಾಂಗಗಳು ಮತ್ತು ಉಪನಿಷತ್ತುಗಳ ಜೊತೆಯಲ್ಲಿ ತಿಳಿದಿದ್ದರೂ ಈ ಭಾರತಾಖ್ಯಾನವನ್ನು ತಿಳಿಯದಿದ್ದರೆ ಅವನು ವಿದ್ವಾಂಸನೇ ಆಗುವುದಿಲ್ಲ.

ಶ್ರುತ್ವಾ ತ್ವಿದಮುಪಾಖ್ಯಾನಂ ಶ್ರಾವ್ಯಮನ್ಯನ್ನ ರೋಚತೇ ।
ಪುಂಸ್ಕೋಕಿಲರುತಂ ಶ್ರುತ್ವಾ ರೂಕ್ಷಾ ಧ್ವಾಂಕ್ಷಸ್ಯ ವಾಗಿವ ॥

ಪುಂಸ್ಕೋಕಿಲಸ್ವರವನ್ನು ಕೇಳಿ ಕಾಗೆಯ ಒರಟಾದ ಧ್ವನಿಯು ಹೇಗೆ ರುಚಿಸುವುದಿಲ್ಲವೋ ಹಾಗೆ ಈ ಮಹಾಭಾರತ ಆಖ್ಯಾನವನ್ನು ಕೇಳಿದ ಮೇಲೆ ಬೇರೆ ಯಾವುದನ್ನೂ ಕೇಳಲು ರುಚಿಸುವುದಲ್ಲ.

**ಇತಿಹಾಸೋತ್ತಮಾದಸ್ಮಾಜ್ಜಾಯಂತೇ ಕವಿಬುದ್ಧಯಃ ।**
**ಪಂಚಭ್ಯ ಇವ ಭೂತೇಭ್ಯೋ ಲೋಕಾಃ ಸಂವಿಧಯಸ್ತ್ರಯಃ ॥**

ಪಂಚಭೂತಗಳಿಂದ ಎಲ್ಲ ಲೋಕಗಳ ನಿರ್ಮಾಣ- ವಾದಂತೆ ಎಲ್ಲ ಕವಿಗಳ ಬುದ್ಧಿಗಳೂ ಈ ಶ್ರೇಷ್ಠವಾದ ಇತಿಹಾಸದಿಂದ ಉಂಟಾಗುತ್ತವೆ.

**ಅಸ್ಯಾಖ್ಯಾನಸ್ಯ ವಿಷಯೇ ಪುರಾಣಂ ವರ್ತತೇ ದ್ವಿಜಾಃ ।**
**ಅಂತರಿಕ್ಷಸ್ಯ ವಿಷಯೇ ಪ್ರಜಾ ಇವ ಚತುರ್ವಿಧಾಃ ॥**

ಎಲೈ ಬ್ರಾಹ್ಮಣರೇ, ಅಂತರಿಕ್ಷದಲ್ಲಿ ಚಲಿಸುವ ಸೂರ್ಯನ ವಿಷಯದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕುವಿಧವಾದ ಪ್ರಜೆಗಳು ಗೌರವವನ್ನು ಹೊಂದಿರುವಂತೆ ಎಲ್ಲಪುರಾಣಗಳೂ ಈ ಭಾರತದ ಬಗ್ಗೆ ಗೌರವವನ್ನು ಸೂಚಿಸುತ್ತವೆ.

**ಕ್ರಿಯಾಗುಣಾನಾಂ ಸರ್ವೇಷಾಮಿದಮಾಖ್ಯಾನಮಾಶ್ರಯಃ ।**
**ಇಂದ್ರಿಯಾಣಾಂ ಚ ಸರ್ವೇಷಾಂ ಚಿತ್ರೈವ ಮನಸಃ ಕ್ರಿಯಾಃ ॥**

ಎಲ್ಲ ಇಂದ್ರಿಯಗಳ ವಿಚಿತ್ರಕ್ರಿಯೆಗಳಿಗೆ ಮನಸ್ಸು ಆಧಾರವಾದಂತೆ, ಗ್ರಂಥರಚನೆಯಲ್ಲಿರಬೇಕಾದ ಎಲ್ಲಾ ಗುಣಗಳಿಗೆ ಈ ಭಾರತದ ಆಖ್ಯಾನವು ಆಶ್ರಯವಾಗಿದೆ.

**ಅನಾಶ್ರಿತ್ಯೈತದಾಖ್ಯಾನಂ ಕಥಾ ಭುವಿ ನ ವಿದ್ಯತೇ ।**
**ಆಹಾರಮನಪಾಶ್ರಿತ್ಯ ಶರೀರಸ್ಯೇವ ಧಾರಣಮ್ ॥**
**ಇದಂ ಸರ್ವೈಃ ಕವಿವರೈರಾಖ್ಯಾನಮುಪಜೀವ್ಯತೇ ।**
**ಉದಯಪ್ರೇಪ್ಸುಭಿರ್ಭೃತ್ಯೈರಭಿಜಾತ ಇವೇಶ್ವರಃ ॥**

ಆಹಾರವನ್ನು ಆಶ್ರಯಿಸದೆ ಶರೀರವು ಹೇಗೆ ಉಳಿಯುವುದಿಲ್ಲವೋ ಹಾಗೆ ಈ ಭಾರತವನ್ನು ಉಪಜೀವಿಸದೆ ಭೂಮಿಯಲ್ಲಿ ಯಾವ ಕಥೆಯೂ ಇರುವುದಿಲ್ಲ. ಶ್ರೇಯಸ್ಕಾಮಿಗಳಾದ ಜನರು ಮತ್ಸ್ಯಕೂರ್ಮಾದಿ ಅವತಾರಗಳನ್ನು ಧರಿಸಿದ ನಾರಾಯಣನನ್ನು ಉಪಜೀವಿಸುವಂತೆ ಎಲ್ಲ ಶ್ರೇಷ್ಠ ಕವಿಗಳೂ ಈ ಭಾರತವನ್ನು ಉಪಜೀವಿಸುತ್ತಾರೆ.

ದ್ವೈಪಾಯನೌಷ್ಠಪುಟನಿಃಸೃತಮಪ್ರಮೇಯಂ
ಪುಣ್ಯಂ ಪವಿತ್ರಮಥ ಪಾಪಹರಂ ಶಿವಂ ಚ ।
ಯೋ ಭಾರತಂ ಸಮಾಧಿಗಚ್ಛತಿ ವಾಚ್ಯಮಾನಂ
ಕಿಂ ತಸ್ಯ ಪುಷ್ಕರಜಲೈರಭಿಷೇಚನೇನ ॥

ಯಾವನು ವೇದವ್ಯಾಸರ ಓಷ್ಠಪುಟಗಳಿಂದ ಹೊರಗೆ ಹರಿದುಬಂದ ಪುಣ್ಯಪ್ರದವೂ, ಪವಿತ್ರವೂ, ಪಾಪಹರವೂ, ಮಂಗಳಪ್ರದವೂ ಆದ ಈ ಭಾರತದ ಕಥೆಯನ್ನು ನಿರೂಪಿಸುವುದನ್ನು ಕೇಳುತ್ತಾನೆಯೋ ಅವನಿಗೆ ಪುಷ್ಕರತೀರ್ಥದ ಜಲದ ಸ್ನಾನದಿಂದ ಆಗಬೇಕಾದ ಪ್ರಯೋಜನವೇನು?

ಯೇನ ತ್ವಯಾ ಭಾರತತೈಲಪೂರ್ಣಃ ಪ್ರಜ್ವಾಲಿತೋ ಜ್ಞಾನಮಯಃ ಪ್ರದೀಪಃ ॥

ಮಹಾಭಾರತವೆಂಬ ತೈಲದಿಂದ ಪೂರ್ಣವಾದ ಜ್ಞಾನವೆಂಬ ದೀಪವನ್ನು ತಾವು ಪ್ರಜ್ವಲಿಸಿದ್ದೀರಿ.

ಸರ್ವೇಷಾಂ ಕವಿಮುಖ್ಯಾನಾಂ ಉಪಜೀವ್ಯೋ ಭವಿಷ್ಯತಿ ।
ಪರ್ಜನ್ಯ ಇವ ಭೂತಾನಾಮಕ್ಷಯೋ ಭಾರತದ್ರುಮಃ ॥

ಎಲ್ಲಾ ಬಗೆಯ ಕವಿಗಳೆಂಬ ಹಕ್ಕಿಗಳಿಗೆ ಆಸರೆ ನೀಡುವ ಸಂಸಾರತಾಪದಿಂದ ಬಳಲಿದವರಿಗೆ ನೆರಳನ್ನು ನೀಡುವ ಮಹಾಭಾರತವು ವೃಕ್ಷದಂತೆ ಕಂಗೊಳಿಸುತ್ತಿದೆ.

ಅಜ್ಞಾನತಿಮಿರಾಂಧಸ್ಯ ಲೋಕಸ್ಯ ತು ವಿಚೇಷ್ಟತಃ ।
ಜ್ಞಾನಾಂಜನಶಲಾಕಾಭಿರ್ನೇತ್ರೋನ್ಮೀಲನಕಾರಕಮ್॥

ಅಜ್ಞಾನವೆಂಬ ಕತ್ತಲೆಯಿಂದ ಕುರುಡನಾಗಿ ಹಾದಿಯನ್ನು ತಿಳಿಯದೇ ವಿಭ್ರಾಂತರಾದವರಿಗೂ ಕಣ್ಣುಗಳನ್ನು ತೆರೆಸುವುದೇ ಈ ಮಹಾಭಾರತ.

ಧರ್ಮಾರ್ಥಕಾಮಮೋಕ್ಷಾರ್ಥೈಃ ಸಮಾಸವ್ಯಾಸಕೀರ್ತನೈಃ ।
ತ್ವಯಾ ಭಾರತಸೂರ್ಯೇಣ ನೃಣಾಂ ವಿನಿಹತಂ ತಮಃ ॥

ಧರ್ಮ, ಅರ್ಥ, ಕಾಮ, ಮೋಕ್ಷ ಇವುಗಳನ್ನು ಸಂಕ್ಷೇಪವಾಗಿ ಮತ್ತು ವಿಸ್ತಾರವಾಗಿ ಹೇಳುವ ಮೂಲಕ ಮಹಾಭಾರತವೆಂಬ ಸೂರ್ಯವು ಅಜ್ಞಾನಿಗಳ ಕತ್ತಲೆಯನ್ನು ಪರಿಹರಿಸುತ್ತದೆ.

ಧರ್ಮೇಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ ।
ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ಕ್ವಚಿತ್ ॥

ಧರ್ಮ, ಅರ್ಥ, ಕಾಮ, ಮೋಕ್ಷಗಳ ವಿಷಯದಲ್ಲಿ ಈ ಗ್ರಂಥದಲ್ಲಿ ಯಾವ ಯಾವ ವಿಷಯಗಳಿವೆಯೋ ಅದು ಬೇರೆ ಗ್ರಂಥಗಳಲ್ಲಿ ಇದ್ದೇ ಇರುತ್ತದೆ. ಈ ಮಹಾಭಾರತದಲ್ಲಿ ಯಾವುದಿಲ್ಲವೋ ಅದು ಬೇರೆ ಎಲ್ಲಿಯೂ ಇರುವುದಿಲ್ಲ.

**ಯಥಾ ಸಮುದ್ರೋ ಭಗವಾನ್ ಯಥಾ ಚ ಹಿಮವಾನ್ ಗಿರಿಃ ।**
**ಖ್ಯಾತಾವುಭೌ ರತ್ನನಿಧೀ ತಥಾ ಭಾರತಮುಚ್ಯತೇ ॥**

ರತ್ನಕರಗಳಲ್ಲಿ ಸಮುದ್ರ ಹಾಗೂ ಹಿಮಾಲಯಗಳು ಹೇಗೆ ಪ್ರಸಿದ್ಧವಾಗಿವೆಯೋ ಅದಕ್ಕಿಂತಲೂ ಹೆಚ್ಚು ಅನೇಕ ಜನ್ಮಗಳನ್ನೇ ಬೆಳಗಿಸುವ ಅನಂತ ರತ್ನಗಳು ಮಹಾಭಾರತದಲ್ಲಿವೆ.

## ಮೂಲ ಮಹಾಭಾರತದಲ್ಲಿರುವ ಸಮಸ್ಯೆಗಳು

ಪ್ರತಿಯೊಬ್ಬ ಮತಾಚಾರ್ಯರೂ ಕೂಡ ತಮ್ಮ ತಮ್ಮ ಕೃತಿಗಳಲ್ಲಿ ನೂರಾರು ಪ್ರಾಚೀನ ಗ್ರಂಥಗಳನ್ನು ಉದಾಹರಿಸುತ್ತಾರೆ. ಅದರಲ್ಲಿಯೂ ವಿಶೇಷವಾಗಿ ಶ್ರೀಮನ್ಮಧ್ವಚಾರ್ಯರು ತಮ್ಮ ಗ್ರಂಥಗಳಲ್ಲಿ ನೂರಾರು ಗ್ರಂಥಗಳನ್ನು ಬಹಳವಾಗಿ ಉಲ್ಲೇಖಿಸುತ್ತಾರೆ. ಆದರೆ ಆ ಎಲ್ಲಾ ಗ್ರಂಥಗಳೂ ಕೂಡ ಕಾಲಪ್ರವಾಹದಲ್ಲಿ ಕೊಚ್ಚಿಹೋಗಿರುವುದೇ ನಮ್ಮ ದುರ್ದೈವ. ಮಹಾಭಾರತ ಗ್ರಂಥವೂ ಕೂಡ ೬೦ ಲಕ್ಷ ಶ್ಲೋಕದಿಂದ ಮೊದಲು ರಚಿತವಾಗಿತ್ತು ಎಂಬ ಉಲ್ಲೇಖವಿದೆ. ಆದರೆ ನಮಗೆ ಈಗ ದೊರೆಯುತ್ತಿರುವುದು ಕೇವಲ ೧ ಲಕ್ಷ ಶ್ಲೋಕಗಳು ಮಾತ್ರ. ಒಟ್ಟಾರೆ ಸಾರಸ್ವತ ಪ್ರಪಂಚದಲ್ಲಿ ಗ್ರಂಥಕೋಟಿಯ ಒದಂಶವೂ ಕೂಡ ಇಂದು ನಮಗೆ ದೊರೆಯುತ್ತಿಲ್ಲ. ದೊರೆಯುತ್ತಿರುವ ಅಲ್ಪಸ್ವಲ್ಪ ಗ್ರಂಥಗಳೂ ಕೂಡ ಪರಿಶುದ್ಧವಾಗಿಲ್ಲ -

**ಅನುತ್ಸನ್ನಾ ಅಪಿ ಗ್ರಂಥಾಃ ವ್ಯಾಕುಲಾಃ ಇತಿ ಸರ್ವಶಃ ।**
**ಉತ್ಸನ್ನಾಃ ಪ್ರಾಯಶಃ ಸರ್ವೇ ಕೋಟ್ಯಂಶೋಪಿ ನ ವರ್ತತೇ ॥**

ದುರ್ದೈವ ಎಂದರೆ ಕೆಲವು ಮಂದಿ ಇಂತಹ ಶ್ರೇಷ್ಠವಾದ ಗ್ರಂಥಗಳಲ್ಲಿಯೂ ತಮ್ಮ ಕೈವಾಡವನ್ನು ತೋರಿಸಿಬಿಟ್ಟಿದ್ದಾರೆ. ಶುದ್ಧವಾದ ಪಾಠವನ್ನು ತೆಗೆದುಹಾಕಿ, ಅಶುದ್ಧವಾದ ಪಾಠಗಳನ್ನು ಗ್ರಂಥದಲ್ಲಿ ಸೇರಿಸಿ ತಾಳೆಗರಿಗಳಲ್ಲಿ ಬರೆದಿಟ್ಟುಬಿಟ್ಟಿದ್ದಾರೆ. ಮತ್ತು ಇನ್ನು ಕೆಲವರು ಇರುವ ಶ್ಲೋಕಗಳನ್ನೇ ತಿದ್ದಿ ವ್ಯತ್ಯಾಸ ಮಾಡಿಬಿಟ್ಟಿದ್ದಾರೆ. ತಮ್ಮಲ್ಲಿರುವ ಅಜ್ಞಾನದ ದೋಷದಿಂದ ಗ್ರಂಥವನ್ನು ಹಾಳುಮಾಡಿದ್ದಾರೆ. ಹಿಂದಿನ ಕಾಲದಿಂದಲೂ ಹೀಗೆಯೇ ನಮ್ಮ ಗ್ರಂಥಗಳ ಮೇಲೆ ಅನೇಕ ಆಕ್ರಮಣಗಳು ನಡೆದುಬಿಟ್ಟಿವೆ.

ಆದರೆ ಮತ್ತೊಂದು ಜನರ ಗುಂಪು ಶುದ್ಧವಾದ ಪಾಠವನ್ನು ನಾವು ಉಳಿಸಿಕೊಳ್ಳಬೇಕು.

ಅದನ್ನು ಬೆಳೆಸಬೇಕು, ಪ್ರಚಾರ ಮಾಡಬೇಕು ಎಂದು ಹೋರಾಡುತ್ತಲೇ ಇದ್ದಾರೆ. ಹಲವು ಶತಮಾನಗಳಿಂದ ಸಂಶೋಧನೆಯು ನಡೆಯುತ್ತಲೇ ಬರುತ್ತಿದೆ.

## ಶುದ್ಧ ಪಾಠವನ್ನು ನಿರ್ಣಯಿಸುವ ಬಗೆ ಹೇಗೆ ?

ಮಹಾಭಾರತವು ವೇದವ್ಯಾಸರಿಂದ ೬೦ ಲಕ್ಷ ಶ್ಲೋಕಗಳಿಂದ ರಚಿತವಾಯಿತು. ಅದರಲ್ಲಿ ೩೦ ಲಕ್ಷ ಶ್ಲೋಕಗಳು ದೇವಲೋಕದಲ್ಲಿ, ೧೫ ಲಕ್ಷ ಶ್ಲೋಕಗಳು ಪಿತೃಲೋಕದಲ್ಲಿ, ೧೪ ಲಕ್ಷ ಶ್ಲೋಕಗಳು ಗಂಧರ್ವಲೋಕದಲ್ಲಿ ಇರುತ್ತವೆ. ಉಳಿದ ೧ ಲಕ್ಷ ಶ್ಲೋಕಗಳು ಮಾತ್ರ ಭೂಲೋಕದಲ್ಲಿ ಉಳಿದಿದೆ ಎಂಬ ವಾಡಿಕೆ ಇದೆ. ಕೆಲವರು ೧ಲಕ್ಷ ಶ್ಲೋಕಗಳೂ ಕೂಡ ಮಹಾಭಾರತದಲ್ಲಿ ಇರುವುದಿಲ್ಲ. ವೇದವ್ಯಾಸದೇವರಿಂದ ನೇರವಾಗಿ ಬಂದಿರುವ ಶ್ಲೋಕಗಳು ಕೇವಲ ೨೪೦೦೦ ಮಾತ್ರ, ಉಳಿದವು ವೈಶಂಪಾಯನರಿಂದ ಅನಂತರ ಪ್ರಕಟಣೆಗೊಂಡವು ಎಂದು ಹೇಳುತ್ತಾರೆ. ಆದರೆ ಇದು ನಿರಾಧಾರವಾದುದು.

ಪ್ರಪ್ರಥಮವಾಗಿ ಮಹಾಭಾರತದ ಸಂಶೋಧನೆ- ಯನ್ನು ಮಾಡಿ, ಶುದ್ಧಪಾಠಕ್ಕನುಗುಣವಾಗಿ ಮಹಾಭಾರತದಲ್ಲಿ ಅನೇಕ ಸಮಸ್ಯೆಗಳನ್ನು ಪರಿಹರಿಸುವ ಮೂಲಕ ವ್ಯಾಖ್ಯಾನವನ್ನು ಬರೆದವರು ಶ್ರೀಮನ್ಮಧ್ವಾಚಾರ್ಯರು. ಶ್ರೀಮನ್ಮಧ್ವಾಚಾರ್ಯರು ಎಲ್ಲಿಯ ತನಕ ಮಹಾಭಾರತಕ್ಕೆ ವ್ಯಾಖ್ಯಾನವನ್ನು ಬರೆಯಲಿಲ್ಲವೋ, ಅಲ್ಲಿಯ ತನಕ ಮಹಾಭಾರತದಲ್ಲಿ ಇರುವ ಸಮಸ್ಯೆಗಳ ಜಟಿಲತೆಯೂ ಪರಿಹಾರವಾಗಿರಲಿಲ್ಲ.

ಮಹಾಭಾರತದ ಮಂಗಳಶ್ಲೋಕದಲ್ಲಿಯೇ ವಿವಾದವಿರುವುದು ಇನ್ನೂ ಹೆಚ್ಚಿನ ಆಶ್ಚರ್ಯಕ್ಕೆ ಕಾರಣವಾಗಿದೆ. ಕೆಲವರು 'ನಾರಾಯಣಂ ನಮಸ್ಕೃತ್ಯ' ಎಂಬುದನ್ನು ಮಂಗಳಶ್ಲೋಕವೆನ್ನುತ್ತಾರೆ. ಇನ್ನೂ ಕೆಲವರು 'ರೋಮಹರ್ಷಣಪುತ್ರಃ ಉಗ್ರಶ್ರವಃ' ಎಂಬುದನ್ನೇ ಮಂಗಳಶ್ಲೋಕವೆನ್ನುತ್ತಾರೆ. ಆದರೆ ಶ್ರೀಮನ್ಮಧ್ವಾಚಾರ್ಯರು

**'ನಾರಾಯಣಂ ಸುರಗುರುಂ ಜಗದೇಕನಾಥಂ**
**ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।**
**ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ**
**ವಂದೇ ಭವಘ್ನಮರಾಸುರಸಿದ್ಧವಂದ್ಯಮ್ ॥**

ಎಂಬುದೇ ಮಹಾಭಾರತದ ಮಂಗಳಶ್ಲೋಕವೆಂದು ಘೋಷಿಸಿದ್ದಾರೆ.

ಶ್ರೀಮನ್ಮಧ್ವಾಚಾರ್ಯರ ಪರಂಪರೆಯಲ್ಲಿ ಬಂದಿರುವ ಮತ್ತೊಬ್ಬ ಧೀರೋದಾತ್ತ ವ್ಯಾಖ್ಯಾನಕರ್ತೃಗಳೆಂದರೆ ಶ್ರೀಮನ್ ವಾದಿರಾಜತೀರ್ಥರು. ಇವರು

ಮಹಾಭಾರತಗ್ರಂಥಕ್ಕೆ 'ಲಕ್ಷಾಲಂಕಾರ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಮತ್ತು ಶ್ರೀಮದಾಚಾರ್ಯರ 'ಮಹಾಭಾರತ ತಾತ್ಪರ್ಯನಿರ್ಣಯ' ಎಂಬ ಗ್ರಂಥಕ್ಕೂ ಕೂಡ ವ್ಯಾಖ್ಯಾನವನ್ನು ಬರೆದಿದ್ದಾರೆ. ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದ ವ್ಯಾಖ್ಯಾನದಲ್ಲಿ ಶ್ರೀ ವಾದಿರಾಜರು 'ನಾರಾಯಣಂ ಸುರಗುರುಂ' ಎಂಬ ಶ್ಲೋಕವೇ ಮಂಗಳಶ್ಲೋಕವೆಂದು ದಾಖಲಿಸಿದ್ದಾರೆ. ತಾವು ಕೇರಳ ಪ್ರದೇಶದಲ್ಲಿ ಸಂಚರಿಸುತ್ತಿರುವಾಗ ಅಲ್ಲಿ ದೊರೆತ ತಾಳೆಗರಿಯಲ್ಲಿ ಈ ಪಾಠವು ದೊರೆತಿದೆ ಎನ್ನುತ್ತಾರೆ – 'ಕೇರಳದೇಶಸ್ಯ ಪುರಾತನ ಪುಸ್ತಕೇಷು ಅದ್ಯಾಪಿ ದೃಶ್ಯತೇ' (ತಾತ್ಪರ್ಯನಿರ್ಣಯ ೨-೫೭).

ಶ್ರೀಮದಾಚಾರ್ಯರು ಅನೇಕ ಶೈಥಿಲ್ಯಗಳನ್ನು ತಮ್ಮ ಪ್ರಭಾವದಿಂದ, ಉಪನ್ಯಾಸಗಳಿಂದ, ಗ್ರಂಥಗಳ ರಚನೆಯಿಂದ ಬಹಳವಾಗಿ ಸರಿಪಡಿಸಿದ್ದಾರೆ. ಹಾಗೂ ಗ್ರಂಥಗಳ ಸರಿಯಾದ ಅರ್ಥವನ್ನು ಪ್ರಚುರ ಪಡಿಸಿದ್ದಾರೆ. ಈ ರೀತಿಯಾಗಿ ಮಾಡಿರುವ ಕಾರ್ಯವೈಖರಿ ಬೇರೆ ಯಾರಲ್ಲಿಯೂ ಕಾಣಸುವುದಿಲ್ಲ. ಮಹಾಭಾರತವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕಾದರೆ, ಹಿಂದೆಯೂ ಮತ್ತೆ ಇಂದಿಗೂ ಶ್ರೀಮನ್ಮಧ್ವಾಚಾರ್ಯರೇ ದಾರಿದೀಪವಾಗಿದ್ದಾರೆ. ಈ ಕಾರಣದಿಂದ ಶ್ರೀಮನ್ಮಧ್ವಾಚಾರ್ಯರ ಮತ್ತು ಶ್ರೀಮನ್‌ವಾದಿರಾಜತೀರ್ಥರ ಮಾರ್ಗದರ್ಶನದಲ್ಲಿ ಮೂಲಮಹಾಭಾರತವನ್ನು ನಾವು ತಿಳಿದುಕೊಳ್ಳಬೇಕು. ಆದರೆ ಇಲ್ಲಿಯ ತನಕ ಈ ಕೆಲಸ ಆಗಿರುವುದಿಲ್ಲ.

ಇಂದು ದೊರಕುತ್ತಿರುವ ಹಲವಾರು ತಾಳೆಗರಿ ಪ್ರತಿಗಳಲ್ಲಿ ಶುದ್ಧಪಾಠವನ್ನು ಹುಡುಕುವುದೇ ಒಂದು ಸಾಹಸದ ಕೆಲಸ. ಇದಕ್ಕಾಗಿ ನೈಪುಣ್ಯಪಡೆದ ಸಂಶೋಧಕ ಪಡೆಯೇ ಬೇಕಾಗುತ್ತದೆ. ಅನೇಕ ವಿದ್ವಾಂಸರ ಪರಸ್ಪರ ಸಹಕಾರ ಅನಿವಾರ್ಯವಾಗುತ್ತದೆ. ಮತ್ತು ಶ್ರೀಮನ್ಮಧ್ವಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯ ಮತ್ತು ಶ್ರೀಮನ್‌ವಾದಿರಾಜತೀರ್ಥರ ಲಕ್ಷಾಲಂಕಾರಗಳ ವಿಶೇಷ ಅಧ್ಯಯನವನ್ನು ಹೊಂದಿರುವ ವಿದ್ವಾಂಸರೇ ಈ ಸಂಶೋಧನೆಯನ್ನು ನಡೆಸಬೇಕು. ಅಂತಹ ಸಂಶೋಧಕರು ನಮ್ಮಲ್ಲಿ ಇದ್ದಾರೆಂಬುದೇ ಹೆಮ್ಮೆಯ ವಿಷಯ.

## ನಾವು ಮಾಡುತ್ತಿರುವ ಕಾರ್ಯ

ನಮ್ಮ ಬಳಿ ಸುಮಾರು ೫೦೦ ವರ್ಷಗಳಿಗಿಂತಲೂ ಪ್ರಾಚೀನವಾದ ಮಹಾಭಾರತ ತಾಳೆಗರಿಗಳ ಸಂಗ್ರಹವಿದೆ. ಈ ತಾಳೆಗರಿಗಳು ಬಹುಷಃ ಶ್ರೀಮದ್ ವಾದಿರಾಜತೀರ್ಥರ ಕಾಲದಲ್ಲಿ ಬರೆದಿರಬಹುದೆಂದು ಊಹಿಸಲಾಗಿದೆ. ತಾತ್ಪರ್ಯನಿರ್ಣಯ ಹಾಗೂ ಲಕ್ಷಾಲಂಕಾರ ಎಂಬ ವ್ಯಾಖ್ಯಾನಗಳಿಗೆ ಇವುಗಳಲ್ಲಿರುವ ಪಾಠ ಬಹಳ ಹತ್ತಿರವಾಗಿವೆ.

ಇಷ್ಟು ಅಮೂಲ್ಯವಾದ ತಾಳೆಗರಿಗಳ ಗ್ರಂಥಸಮುದಾಯವು ಇದುವರೆಗೂ ಪ್ರಕಾಶನವೇ ಆಗಿರುವುದಿಲ್ಲ. ಇದನ್ನು ಪ್ರಕಾಶನ ಪಡಿಸುವುದು ಸುಲಭದ ಮಾತೂ ಅಲ್ಲ. ಅನೇಕ ವಿದ್ವಾಂಸರ ಸಹಕಾರವಷ್ಟೇ ಅಲ್ಲದೇ ಸಾವಿರಾರು ಜನರ ಬೆಂಬಲ ಬೇಕಾಗುತ್ತದೆ. ಅತ್ಯಂತ ಶ್ರದ್ಧೆಯಿರುವ ಪೀಠಾಧಿಪತಿಗಳಿಂದಷ್ಟೇ ಇಂಥಾ ದೊಡ್ಡ ಕಾರ್ಯವನ್ನು ನಡೆಸಲು ಸಾಧ್ಯ. ಸಾಮಾನ್ಯವ್ಯಕ್ತಿಗಳಿಗೆ ಇಂಥ ಘನಕಾರ್ಯದ ಕಷ್ಟವನ್ನು ಊಹಿಸಲೂ ಕೂಡ ಸಾಧ್ಯವಿಲ್ಲ.

ನಾವು ಪ್ರಕೃತ ಅನೇಕ ತಾಳೆಗರಿಗಳ ಪಾಠಗಳನ್ನು ಹೊಂದಿರುವುದಷ್ಟೇ ಅಲ್ಲದೇ ಮುದ್ರಿತ ಪುಸ್ತಕಗಳೆಲ್ಲವನ್ನೂ ಕೂಡ ಸಂಗ್ರಹಿಸಿದ್ದೇವೆ. ನಮ್ಮ ಕಣ್ಣೆದುರಿಗೆ ಕಾಣಿಸುವ ಎಲ್ಲ ಗ್ರಂಥಗಳನ್ನು ಒಟ್ಟು ಸೇರಿಸಿ, ಪ್ರಾಚೀನ ತಾಳೆಗರಿಗಳನ್ನು ಓದಲು ಪರಿಣತರಾದ ಯುವಕ ವಿದ್ವಾಂಸರ ಬಳಿ ಅವುಗಳನ್ನೆಲ್ಲಾ ತರ್ಜುಮೆಗೊಳಿಸಿ ಸಂಶೋಧನೆಯ ಕಾರ್ಯ ಭರದಿಂದ ನಡೆಯುತ್ತಿದೆ.

ಮೊಟ್ಟಮೊದಲು ಶುದ್ಧವಾದ ಪಾಠವನ್ನು ನಿರ್ಣಯಿಸುವುದೇ ದೊಡ್ಡ ಕೆಲಸ. ಶುದ್ಧ ಪಾಠ ದೊರೆತ ಮೇಲೆ ಪ್ರಥಮಬಾರಿಗೆ ಕನ್ನಡಭಾಷೆಯಲ್ಲಿ ಪ್ರತಿಶ್ಲೋಕಗಳ ಅನುವಾದವನ್ನೂ ಮಾಡುತ್ತಿದ್ದೇವೆ.

ಒಂದು ದೊಡ್ಡ ಕಟ್ಟಡವನ್ನು ನಿರ್ಮಾಣ ಮಾಡಬೇಕೆಂದರೆ ಶ್ರೀಮಂತನಾದ ವ್ಯಕ್ತಿಯಿಂದ ಹಿಡಿದು ಕೂಲಿಕೆಲಸಗಾರನ ತನಕ ಪ್ರತಿಯೊಬ್ಬನೂ ದುಡಿಯಬೇಕು. ತಮ್ಮ ತಮ್ಮ ಅರ್ಹತೆಗೆ ತಕ್ಕಂತೆ ತಾವು ದುಡಿದಾಗ ಮಾತ್ರ ಅಚ್ಚುಕಟ್ಟಾದ ಕಟ್ಟಡವು ನಿರ್ಮಾಣವಾಗುತ್ತದೆ. ಅದರಂತೆ ನಾವೂ ಕೂಡ ಮಹಾಭಾರತ ಎಂಬ ಸುಭದ್ರವಾದ ಅರಮನೆಯನ್ನು ಕಟ್ಟಬೇಕಾಗಿದೆ. ಇದಕ್ಕಾಗಿ ಶ್ರೀಮಂತರಾದ ವ್ಯಕ್ತಿಗಳಷ್ಟೇ ಅಲ್ಲದೇ, ಅಥವಾ ಶ್ರೇಷ್ಠವಿದ್ವಾಂಸರಷ್ಟೇ ಅಲ್ಲದೇ ಪ್ರತಿಯೊಬ್ಬ ಜನಸಾಮಾನ್ಯರೂ ಕೂಡ ಇದರಲ್ಲಿ ಪಾಲ್ಗೊಳ್ಳಬೇಕು. ನೀವು ನೀಡುವ ಪ್ರತಿಯೊಂದು ರೂಪಾಯಿಗಳೇ ಶ್ಲೋಕದಲ್ಲಿರುವ ಅಕ್ಷರಗಳ ಜೋಡಣೆ.

ಮೂವತ್ತೆರಡು ಅಕ್ಷರಗಳು ಸೇರಿ ಒಂದು ಶ್ಲೋಕವಾಗುತ್ತದೆ. ಈ ಮೂವತ್ತೆರಡು ಅಕ್ಷರಗಳ ಮಧ್ಯದಲ್ಲಿ ಒಂದು ಅಕ್ಷರವಿಲ್ಲದಿದ್ದರೂ ಶ್ಲೋಕವು ಪರಿಪೂರ್ಣ- ವಾಗುವುದಿಲ್ಲ. ಅದರಂತೆ ನೀವು ನೀಡುವ ಒಂದು ರೂಪಾಯಿ ಇಲ್ಲದಿದ್ದರೂ ನಮ್ಮ ಈ ಯೋಜನೆ ಪರಿಪೂರ್ಣವಾಗುವುದಿಲ್ಲ. ಅದಕ್ಕಾಗಿ ನಿಮ್ಮ ಅನುಕೂಲಕ್ಕೆ ತಕ್ಕಂತೆ ಎಲ್ಲರೂ ಕೂಡ ಇದರಲ್ಲಿ ಭಾಗವಹಿಸಿರಿ. ನೀವು ಎಷ್ಟು ರೀತಿಯಲ್ಲಿ ಇದರಲ್ಲಿ ತೊಡಗಿ ಮಹಾಭಾರತವನ್ನು ರಕ್ಷಿಸುತ್ತೀರೋ ಅಷ್ಟೇ ಉನ್ನತಮಾರ್ಗದಲ್ಲಿ ಮಹಾಭಾರತ ಗ್ರಂಥವು ನಿಮ್ಮನ್ನು ರಕ್ಷಿಸುತ್ತದೆ.

'ಮಹಾಭಾರತ ಗ್ರಂಥವನ್ನು ನೀವು ರಕ್ಷಣೆ ಮಾಡಿ, ಮಹಾಭಾರತ ಗ್ರಂಥವು ನಿಮ್ಮನ್ನು ರಕ್ಷಿಸುತ್ತದೆ'. 'ಮಹಾಭಾರತ ಗ್ರಂಥವನ್ನು ನೀವು ಎಲ್ಲೆಡೆ ಬೆಳೆಸಿರಿ. ಎಲ್ಲೆಡೆ ಬೆಳೆದಿರುವ ಮಹಾಭಾರತ ಗ್ರಂಥವು ನಿಮ್ಮನ್ನೂ ಕೂಡ ಎಲ್ಲೆಡೆ ಬೆಳೆಸುತ್ತದೆ'. 'ನೀವಿಲ್ಲದೇ ಮಹಾಭಾರತವಿಲ್ಲ. ಮಹಾಭಾರತವಿಲ್ಲದೇ ನೀವಿಲ್ಲ'. 'ನಿಮ್ಮಲ್ಲಿ ಮಹಾಭಾರತ. ಮಹಾಭಾರತದಲ್ಲಿ ನೀವು'. ಬನ್ನಿ !! ಜೊತೆಯಾಗಿ ಶ್ರಮಿಸೋಣ. ಮಾನವಕುಲದ ಜ್ಞಾನದಾಹವನ್ನು ಇಂಗಿಸೋಣ. ಸರ್ವರಿಗೂ ಸುಖ-ಶಾಂತಿ ಸಮೃದ್ಧಿಯನ್ನು ಸಾಧಿಸೋಣ.

## ಭಂಡಾರ್ಕರ್ ಸಂಸ್ಥೆಯ ಸಾಧನೆ

ಪುಣೆಯ ಶ್ರೀ ವಿಷ್ಣು ಎಸ್. ಸೂಕ್ತಂಕರ್ ಎಂಬ ವಿದ್ವಾಂಸರು ಕ್ರಿ.ಶ. ೧೯೧೫ ದಲ್ಲಿ ಶುದ್ಧಪ್ರತಿಗಾಗಿ ಬಹಳ ಶ್ರಮಪಟ್ಟಿದ್ದಾರೆ. ಅವರು ತಮ್ಮ ಕಾರ್ಯದಲ್ಲಿ ಔಂಧದೇಶರಾಜನಾದ ಶ್ರೀಮನ್ ಬಾಳಸಾಹೇಬ್ ಪಂತ್ ಪ್ರತಿನಿಧಿ ಎಂಬ ವ್ಯಕ್ತಿಯ ಸಹಕಾರವನ್ನು ಪಡೆದಿರುತ್ತಾರೆ. ಅಷ್ಟೇ ಅಲ್ಲದೇ, ಎಸ್. ಬೆಲ್‌ವೆಲ್‌ಕರ್, ಎ.ಬಿ. ಗಜೇಂದ್ರಗಡ್ಕರ್, ಪಿ.ವಿ. ಕಾಣೆ, ಆರ್.ಡಿ. ಕರಂಕರ್, ವಿ.ಜಿ. ಪರಂಜಪೆ, ವಿ.ಕೆ. ರಾಜವಾಡೆ, ಎನ್.ಬಿ. ಉತ್‌ಜೀಕರ್, ಪಿ.ಎಲ್. ವೈದ್ಯ, ವಿ.ಪಿ. ವೈದ್ಯ ಮೊದಲಾದ ವಿದ್ವಾಂಸರ ಸಂಪೂರ್ಣ ಸಹಕಾರವನ್ನು ಬಹಳವಾಗಿ ಪಡೆದಿರುತ್ತಾರೆ. ಭಂಡಾರ್ಕರ್ ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟ್ ಎಂಬ ಸಂಸ್ಥೆಯ ಮೂಲಕ ಇವರೆಲ್ಲರೂ ಮಹಾಭಾರತ ಸಂಶೋಧನೆಗಾಗಿ ಬಹಳ ಪ್ರಯತ್ನಪಟ್ಟಿದ್ದಾರೆ.

ಈ ಇನ್‌ಸ್ಟಿಟ್ಯೂಟ್‌ನ ಡಿ.ಎನ್.ಆರ್. ಎಂಬ ಮುಖ್ಯಸ್ಥರು ತಮ್ಮ ಪ್ರಯತ್ನದ ಪ್ರತಿಫಲವಾದ ಮಹಾಭಾರತದ ಕ್ರಿಟಿಕಲ್ ಎಡಿಷನ್ ಎಂಬ ಪುಸ್ತಕಗಳಲ್ಲಿ ತಮ್ಮ ಅನುಭವವನ್ನು ಹಂಚಿಕೊಂಡಿದ್ದಾರೆ. ಸಂಪೂರ್ಣ ೧೮ ಪರ್ವಗಳ ಕಾರ್ಯವನ್ನು ೧೯೬೬ ರಲ್ಲಿ ಪೂರ್ಣಗೊಳಿಸಿದ್ದಾರೆ. ಡಿ.ಎನ್. ರಾಧಾಕೃಷ್ಣನ್ ಅವರು ಸೆಪ್ಟೆಂಬರ್ ೨೨, ೧೯೬೬ರಲ್ಲಿ ಭಂಡಾರ್ಕರ್ ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟ್ ಈ ಸಂಸ್ಥೆಯಿಂದ ಶೋಧಿಸಲ್ಪಟ್ಟ ಸಂಪೂರ್ಣ ಮಹಾಭಾರತವನ್ನು ಉದ್ಘಾಟಿಸಿದರು. ಅನಂತರ ೧೯೭೭ರ ತನಕ ಹರಿವಂಶವನ್ನು ಪ್ರಕಟಣೆ ಮಾಡಿದ್ದಾರೆ.

ವಿ.ಎಸ್. ಸೂಕ್ತಂಕರ್ ಅವರು ತಿಳಿಸುವಂತೆ ಜರ್ಮನ್ ದೇಶದ ವಿಶ್ವವಿದ್ಯಾನಿಲಯದ ಸಂಪೂರ್ಣ ಸಹಕಾರವನ್ನು ತಾವು ಪಡೆದಿದ್ದಾರೆ. ಅಷ್ಟೇ ಅಲ್ಲದೇ ನೇಪಾಳ, ಕಾಶ್ಮೀರ, ತಂಜಾವೂರು, ತಿರುವಾಂಕೂರು ಮೊದಲಾದ ಅನೇಕ ಪ್ರಾಂತಗಳಲ್ಲಿರುವ ನೂರಾರು ಹಸ್ತಪ್ರತಿಗಳನ್ನು ತಾವು ಸಂಗ್ರಹಿಸಿ ಸಂಶೋಧಿಸಿರುವುದಾಗಿ ಹೇಳಿರುತ್ತಾರೆ. ಯೂರೋಪಿನ

ವಿದ್ಯಾವಂತರ ಕೊಡುಗೆಯ ಉಪಕಾರವನ್ನು ಸ್ಮರಿಸಿಕೊಳ್ಳುವ ಸೂಕ್ತಂಕರ್ ಅವರು ನೇಪಾಳರಾಜನ ಬಹಳ ಔದಾರ್ಯವನ್ನೂ ಕೂಡ ಸ್ಮರಿಸಿಕೊಳ್ಳುತ್ತಾರೆ. ಕ್ರಿಟಿಕಲ್ ಎಡಿಷನ್ ಎಂಬ ಬೃಹತ್ ಹೊತ್ತಿಗೆಗಳನ್ನು ಮುದ್ರಣ ಮಾಡಬೇಕೆಂಬ ಅಭಿಪ್ರಾಯವನ್ನು ಮೊದಲು ಘೋಷಿಸಿದವರು ಪ್ರೋ. ವಿಂಟರ್. ೧೮೯೭ರಲ್ಲಿ ಅಂತರರಾಷ್ಟ್ರೀಯ ಸನಾತನಿಗಳ ಸಮೂಹದ ಸಮಿತಿಯ ಮುಂದೆ ಇದನ್ನು ಪ್ರಸ್ತಾಪಮಾಡಿ ಮಹಾಭಾರತದ ಶ್ರೇಷ್ಠತೆಯನ್ನು ಎತ್ತಿಹಿಡಿದರು. ಪುನಃ ಸುಮಾರು ೧೦ ವರ್ಷಗಳ ಕಾಲ ಮಹಾಭಾರತದ ಶುದ್ಧಪಾಠದ ಶೋಧನೆಗಾಗಿ ಬಹಳ ಶ್ರಮಪಟ್ಟರು. ವಿಂಟರ್ ನಿಟ್ಸ್ ಇವರ ಅಭಿಪ್ರಾಯವನ್ನು ಅನೇಕರು ವಿರೋಧ ಮಾಡಿದರೂ ಕೂಡ ೧೯೦೪ರಲ್ಲಿ ಲಂಡನ್ ದೇಶದಲ್ಲಿ ನಡೆದ ಬೃಹತ್ ಸಭೆಯಲ್ಲಿ ಬರ್ಲಿನ್ ಮತ್ತು ವಿಯೆನ್ ಎಂಬ ವಿದ್ಯಾಸಂಸ್ಥೆಗಳು ಮಹಾಭಾರತದ ಶೋಧನೆಯ ಕೆಲಸವು ಮಾಡಲೇಬೇಕೆಂಬ ಸದುದ್ದೇಶದಿಂದ ಧನಸಹಾಯ ಮಾಡಿದವು. ಅನಂತರ ಕೆಲಸವು ಪ್ರಾರಂಭವಾಯಿತು.

ಒಂದನೇ ಪ್ರಪಂಚ ಯುದ್ಧದ ಬಳಿಕ ಭಂಡಾರ್ಕರ್ ಓರಿಯಂಟಲ್ ರೀಸರ್ಚ್ ಇನ್ಸ್ಟಿಟ್ಯೂಟ್ ಇವರು ಈ ಮಹಾಭಾರತದ ಪರಿಶೋಧನೆಯ ಕೆಲಸವನ್ನು ಉತ್ಸಾಹದಿಂದ ಸ್ವೀಕರಿಸಿದರು. ೧೯೧೮ರಲ್ಲಿ ಬಾಳಾ ಸಾಹೇಬ್ ಪಂಡಿತ್ ಇವರು ಆಗಿನ ಕಾಲದಲ್ಲಿ ಉದಾರಮನಸ್ಸಿನಿಂದ ೧ ಲಕ್ಷ ರೂ.ಗಳನ್ನು ನೀಡಿದರು. ಇದರಿಂದಲೇ ಕೆಲಸವು ಅತ್ಯಂತ ವೇಗದಲ್ಲಿ ಪ್ರಾರಂಭವಾಯಿತು. ಸಂಶೋಧನೆ ಮಾಡುವಾಗ ಔತ್ತರೇಯಪಾಠ ಹಾಗೂ ದಾಕ್ಷಿಣಾತ್ಯಪಾಠಗಳಲ್ಲಿ ಬಹಳ ವ್ಯತ್ಯಾಸ ಕಂಡುಬಂದವು. ಅಂತಿಮವಾಗಿ ಔತ್ತರೇಯ- ಪಾಠವನ್ನೇ ಸ್ವೀಕರಿಸಿ ಮಹಾಭಾರತದ ಪರಿಶೋಧನೆಯನ್ನು ಪ್ರಾರಂಭಿಸಿದರು.

೨೦೦ ಕ್ಕೂ ಹೆಚ್ಚು ವಿದ್ವಾಂಸರು ೫೦ ವರ್ಷಗಳಿಗಿಂತಲೂ ಹೆಚ್ಚು ಕಾಲ ಮಹಾಭಾರತದ ಪರಿಶೋಧನೆ ಮಾಡಿರುವ ಭಂಡಾರ್ಕರ್ ಸಂಸ್ಥೆಯ ಈ ಸಾಧನೆಯನ್ನು ಎಲ್ಲರೂ ಕೂಡ ಮೆಚ್ಚಲೇಬೇಕು.

ಆದರೂ ಕೂಡ ಉಡುಪಿಯ ಗ್ರಂಥಾಲಯಗಳಲ್ಲಿ ಇರುವ ಪ್ರಾಚೀನ ಹಸ್ತಪ್ರತಿಗಳನ್ನು ಇವರು ತಮ್ಮ ಶೋಧನೆಯಲ್ಲಿ ಸೇರಿಸಿಲ್ಲ. ಮತ್ತು ತಾತ್ಪರ್ಯನಿರ್ಣಯ ಹಾಗೂ ಲಕ್ಷಾಲಂಕಾರ ಎಂಬೆರಡು ವ್ಯಾಖ್ಯಾನಗಳು ಮಹಾಭಾರತ ಗ್ರಂಥಕ್ಕೆ ಇವೆ ಎಂಬ ವಿಚಾರವನ್ನೂ ಕೂಡ ಇವರು ಮೊದಲು ತಿಳಿದಿರಲಿಲ್ಲ. ಅನಂತರ ಎರಡನೆಯ ಮುದ್ರಣದ ಸಂದರ್ಭದಲ್ಲಿ ತಮಗೆ ಲಕ್ಷಾಲಂಕಾರ ಗ್ರಂಥದ ಪರಿಚಯವಾಯಿತೆಂದು ಮತ್ತು 'ನಾರಾಯಣಂ ಸುರಗುರುಂ' ಎಂಬ ಶ್ಲೋಕವು ಪ್ರಾರಂಭದಲ್ಲಿ ಇರುತ್ತದೆಂದು

ಅವರು ಹೇಳುತ್ತಾರೆ. ಅಷ್ಟೇ ಅಲ್ಲದೇ ವೇದವ್ಯಾಸದೇವರು ೨೪೦೦೦ ಶ್ಲೋಕಗಳು ಮಾತ್ರ ರಚನೆ ಮಾಡಿದ್ದಾರೆ. ಅನಂತರದ ಕಾಲದಲ್ಲಿ ಉಳಿದ ಗ್ರಂಥವು ಬೆಳೆದು ಬಂದಿದೆಯೆಂಬ ಅಭಿಪ್ರಾಯವನ್ನು ನೀಡುತ್ತಾರೆ.

## ಇದುವರೆಗೂ ನಡೆದಿರುವ ಸಂಶೋಧನೆಗಳು

ಇದುವರೆಗೂ ಪ್ರಕಾಶನವಾಗಿರುವ ಸಂಶೋದಿತ ಮಹಾಭಾರತ ಗ್ರಂಥಗಳ ಬಗ್ಗೆ ನೋಡೋಣ.

ಬಂಗಾಳದ ಏಷ್ಯಾಟಿಕ್ ಸೊಸೈಟಿಯ ಆಶ್ರಯದಲ್ಲಿ ಅನೇಕ ವಿದ್ವಾಂಸರುಗಳು ಒಂದು ವಿದ್ಯಾಸಂಸ್ಥೆಯನ್ನು ರಚಿಸಿ, ಪ್ರಪ್ರಥಮಬಾರಿಗೆ ಪೂರ್ಣಮಹಾಭಾರತವನ್ನು ನಾಲ್ಕು ಭಾಗಗಳಲ್ಲಿ ಪ್ರಕಟಿಸಿದರು. ೧೮೩೪ ರಿಂದ ೧೮೩೯ ವರೆಗಿನ ವರ್ಷಗಳಲ್ಲಿ ಪುಸ್ತಕರೂಪದಲ್ಲಿ ಪ್ರಕಟವಾದವು. ಅಲ್ಲಿಂದ ಮುಂದೆ ಅನೇಕ ಕಡೆ ಪೂರ್ಣಮಹಾಭಾರತದ ಹಲವಾರು ಪ್ರಕಟಣೆಗಳು ಹೊರಬಂದಿವೆ. ಕೆಲವು ಮುಖ್ಯವಾದ ಪ್ರಕಟಣೆಗಳು ಹೀಗಿವೆ –

೧. ಸಂಸ್ಕೃತದ ಮಹಾಭಾರತವನ್ನು ತೆಲುಗುಲಿಪಿಯಲ್ಲಿ ನಾಲ್ಕು ಬಾರಿ ಮದ್ರಾಸಿನಲ್ಲಿ ಪ್ರಕಟಿಸಲಾಯಿತು. ೧೮೫೦ರಲ್ಲಿ ವೆಂಕಟರಾಯಶರ್ಮ ಎಂಬ ವಿದ್ವಾಂಸರು.

೨. ೧೮೫೫-೬೦ ರಲ್ಲಿ ಪುರಾಣಂ ಹಯಗ್ರೀವಶಾಸ್ತ್ರಿ ಎಂಬ ವಿದ್ವಾಂಸರು (ವಾವಿಳ್ಳ ಪ್ರೆಸ್‌ನ ಮುಖ್ಯಸ್ಥರ ಸಂಬಂಧಿಗಳು) ವಾವಿಳ್ಳಪ್ರೆಸ್‌ನಲ್ಲಿ ಪ್ರಕಟಣೆ ಮಾಡಿದರು.

೩. ೧೮೭೦ ರಲ್ಲಿ ವೆಂಕಟಸುಬ್ಬಶಾಸ್ತ್ರಿ ಎಂಬ ವಿದ್ವಾಂಸರು ಪ್ರಕಟಣೆ ಮಾಡಿದರು.

೪. ೧೯೨೯ರಲ್ಲಿ ವಾವಿಳ್ಳ ರಾಮಸ್ವಾಮಿಶಾಸ್ತ್ರಿ ಮತ್ತು ಮಕ್ಕಳು ಮಹಾಭಾರತವನ್ನು ಮಹಾಭಾರತದ ಮೂಲಪ್ರತಿಯನ್ನು ಪ್ರಕಟಣೆ ಮಾಡಿದರು.

೫. ಮತ್ತು ೧೮೭೮ರಲ್ಲಿ ಮುಂಬೈಯ ಗಣಪತಿ ಕೃಷ್ಣಾಜಿ ಪ್ರೆಸ್‌ನವರು ನೀಲಕಂಠಭಾರತ ಭಾವದೀಪದೊಡನೆ, ಮಹಾಭಾರತ ಮೂಲವನ್ನು ಪ್ರಕಟಣೆ ಮಾಡಿದರು.

೬. ಇಷ್ಟೇ ಅಲ್ಲದೇ ಪ್ರತಾಪಚಂದ್ರರೈ ಇವರು ಕಲ್ಕತ್ತಾನಗರದಲ್ಲಿ ಮಹಾಭಾರತವನ್ನು ಪ್ರಕಾಶನ ಮಾಡಿದರಷ್ಟೇ ಅಲ್ಲದೇ ಹಲವಾರು ಪ್ರತಿಗಳನ್ನು ಉಚಿತವಾಗಿ ದಾನ ಮಾಡಿದರು.

೭. ತಂಜಾವೂರು ಜಿಲ್ಲೆಯಲ್ಲಿ ರಂಗಸ್ವಾಮಿದೀಕ್ಷಿತರು ವ್ಯಾಖ್ಯಾನಸಹಿತವಾಗಿ ೧೮೮೨ರಲ್ಲಿ ಪುನಃ ೧೯೦೫ರಲ್ಲಿ ಸಂಸ್ಕೃತದ ಗ್ರಂಥಲಿಪಿಯಲ್ಲಿ ಸಾರಭೋಜಿರಾಜಪುರದ ವೇದವ್ಯಾಸ ಪ್ರೆಸ್‌ನಲ್ಲಿ ಪ್ರಕಟಣೆ ಮಾಡಿದರು.

೮. ೧೯೦೬ ರಲ್ಲಿ ಮಧ್ವವಿಲಾಸಬುಕ್‌ಡಿಪೋದ ಮಾಲೀಕರಾದ ಟಿ.ಆರ್. ಕೃಷ್ಣಾಚಾರ್ಯ ಮತ್ತು ಟಿ.ಆರ್. ವ್ಯಾಸಾಚಾರ್ಯ ಎಂಬ ಇಬ್ಬರು ವಿದ್ವಾಂಸರ ಆಶ್ರಯದಲ್ಲಿ ದಕ್ಷಿಣಭಾರತದ ಮೂಲಪ್ರತಿಗಳನ್ನೇ ಅವಲಂಬಿಸಿ ದಾಕ್ಷಿಣಾತ್ಯಪಾಠವು ಪ್ರಕಟಣೆಯಾಯಿತು.

೯. ೧೮೩೪ರಲ್ಲಿ ವಿಮರ್ಶಾತ್ಮಕವಾಗಿ ಮಹಾಭಾರತವನ್ನು ಅಭ್ಯಾಸ ಮಾಡುವುದರಲ್ಲಿ ವಿದ್ವಾಂಸರಿಗೆ ಹೆಚ್ಚು ಆಸಕ್ತಿಯು ಉಂಟಾಯಿತು. ಆದಕ್ಕಾಗಿ ಅನೇಕ ಪ್ರಾಚ್ಯವಿದ್ಯಾಸಂಸ್ಥೆಗಳು ಈ ನಿಟ್ಟಿನಲ್ಲಿ ಅನೇಕ ಪ್ರಕಟಣೆಯನ್ನು ಹೊರತರಲು ಪ್ರಯತ್ನಿಸಿದವು.

೧೦. ಪ್ರೊಫೆಸರ್ ಮಾರ್ಡೋನೆಲ್‌ರವರು ೪-೯-೧೯೧೯ರಲ್ಲಿ ಲಂಡನ್ ನಗರದಲ್ಲಿ ನಡೆದ ಏಂಟ್‌ಏಂಟಿ ಓರಿಯಂಟಲ್ ಕಾಂಗ್ರೆಸ್‌ನ ಮುಂದೆ ಮಹಾಭಾರತದ ಗ್ರಂಥಪ್ರಕಾಶವನ್ನು ಮಾಡಬೇಕೆಂದು ತಿಳಿಸಿದರು. ಆ ಸಂದರ್ಭದಲ್ಲಿ ವಿಶ್ವದ ಮೊದಲ ಮಹಾಯುದ್ಧವು (ಫಸ್ಟ್ ವರ್ಲ್ಡ್‌ವಾರ್) ನಡೆಯುತ್ತಿತ್ತು. ಮಹಾಭಾರತದ ಮೊದಲ ವಿಮರ್ಶಾತ್ಮಕ ಪ್ರತಿಯನ್ನು ಹೊರತರುವುದರಲ್ಲಿ ದೊಡ್ಡ ವಿಘ್ನವೇ ಬಂದಿತು. ಇದಕ್ಕಾಗಿ ಜರ್ಮನ್ ದೇಶದ ಅನೇಕ ಶ್ರೀಮಂತರು ೬೦೦೦ ಪೌಂಡುಗಳನ್ನು ಮಹಾಭಾರತ ಪ್ರಕಾಶನಕ್ಕಾಗಿ ನೀಡಿದ್ದರು.

೧೧. ಕೆಲವು ಕಾಲದ ಅನಂತರ ಜರ್ಮನ್‌ದೇಶದಲ್ಲಿ ಮಹಾಭಾರತದ ಪ್ರಕಾಶನವನ್ನು ಮುಂದುವರೆಸಲು ಕಷ್ಟವಾಯಿತಾದ್ದರಿಂದ ಮುಂದಿನ ಪ್ರಯತ್ನ ಭಾರತದಲ್ಲಿ ಹೆಚ್ಚಿನ ಅನುಕೂಲತೆ ಮತ್ತು ದಕ್ಷತೆಯಿಂದ ಸಂಶೋಧನಾ- ಕಾರ್ಯವನ್ನು ನಡೆಸಬಹುದು. ಭಾರತದಲ್ಲಿ ಪುರಾತನ ಮತ್ತು ನವೀನ ಸಮಕಾಲೀನ ವಿದ್ವಾಂಸರ ಪ್ರಯೋಜನವನ್ನು ಪಡೆದರೆ ಮಾತ್ರ ಈ ಕಾರ್ಯವು ಅಚ್ಚುಕಟ್ಟಾಗಿ ನಡೆಯಲು ಸಾಧ್ಯವೆಂದು ಸಭೆಯಲ್ಲಿ ವಿಚಾರ ಮಾಡಿದರು. ಆ ಸಮಯದಲ್ಲಿ ಡಾ|| ಜೆ.ಡಬ್ಲ್ಯು. ಥಾಮಸ್ ಅವರು ಭಂಡಾರ್‌ಕರ್‌ರವರು ಮಹಾಭಾರತ ಪ್ರಕಟಣೆಯಲ್ಲಿ ತೊಡಗಿರುವುದನ್ನು ಅದಕ್ಕಾಗಿ ಸ್ವಲ್ಪ ಹಣವನ್ನು ಕೊಡುವುದಾಗಿಯೂ ತಿಳಿಸಿದರು. ಆ ಸಮಯದಿಂದ ಭಂಡಾರಕರ್ ಓರಿಯಂಟಲ್ ಇನ್‌ಸ್ಟಿಟ್ಯೂಟ್ ಪೂನಾ ಇವರು ವಿಮರ್ಶಾತ್ಮಕವಾದ ಮಹಾಭಾರತ ಪ್ರಕಟಣೆಯನ್ನು ಹೊರತರುವುದರಲ್ಲಿ ಬಹಳ ಆಸಕ್ತರಾಗಿದ್ದರು. ಸೂಕ್ತಂಕರ್ ಅವರು ಸಂಪಾದಕರಾಗಿ ಈ ಕಾರ್ಯವನ್ನು ನಡೆಸಲು ಮುಂದಾಗಿದ್ದರು. ಇವರ ಸಹಾಯಕ್ಕಾಗಿ ಸಮರ್ಥರಾದ ಪ್ರಾಚ್ಯಸಂಶೋಧಕ

ವಿದ್ವಾಂಸರ ಭಾರತೀಯ ಮತ್ತು ಇತರ ದೇಶದವರ ನೆರವನ್ನು ಪಡೆಯುವುದರಲ್ಲಿ ಆಸಕ್ತರಾಗಿದ್ದರು.

೧೨. ಸೂಕ್ತಂಕರ್ ಇವರು ಸುಮಾರು ೨೦೦ ವಿದ್ವಾಂಸರ ಸಹಕಾರದಿಂದ ಮೊದಲ ಸಂಚಿಕೆಯನ್ನು ೧೯೨೭ ರಲ್ಲಿ ಹೊರತಂದರು. ಇದರ ಹಿಂದೆ ಸುಮಾರು ೩೦ ವರ್ಷಗಳ ಸತತ ಪರಿಶ್ರಮವನ್ನೇ ಮಹಾಭಾರತ ಪ್ರಕಾಶನಕ್ಕಾಗಿ ಸೂಕ್ತಂಕರ್ ಅವರು ಹೊಂದಿದ್ದರು. ೨ನೆಯ ಮತ್ತು ೩ನೆಯ ಸಂಚಿಕೆಗಳನ್ನು ೧೯೨೮ ಹಾಗೂ ೧೯೨೯ರಲ್ಲಿ ಹೊರತಂದರು. ೪ನೆಯ ಸಂಚಿಕೆಯನ್ನು ೧೯೩೦ರಲ್ಲಿ, ೫ನೆಯ ಸಂಚಿಕೆಯನ್ನು ೧೯೩೫ರಲ್ಲಿ ಹೊರತಂದದ್ದೇ ಬಹಳ ದೊಡ್ಡ ಶ್ಲಾಘನೀಯಕಾರ್ಯವಾಗಿತ್ತು.

೧೩. ಅನಂತರ ಗೋರಕ್‌ಪುರದ ಗೀತಾಪ್ರೆಸ್ ಕೂಡ ಬಹುದೊಡ್ಡ ಕಾರ್ಯವನ್ನು ಮಾಡಿ, ಅತ್ಯಂತ ಸುಲಭದರದಲ್ಲಿ ಮಹಾಭಾರತ ಕೃತಿಯನ್ನು ಎಲ್ಲ ಆಸಕ್ತರಿಗೂ ತಲುಪಿಸುತ್ತಿದೆ. ಹಿಂದಿಭಾಷೆಯ ಅನುವಾದದೊಂದಿಗೆ ಪ್ರತಿ ಮೂಲಶ್ಲೋಕಗಳ ಅನುವಾದವೂ ಮುದ್ರಿತವಾಗಿದೆ.

೧೪. ಆಳಸಿಂಗಾಚಾರ್ಯರು ಪ್ರಪ್ರಥಮಬಾರಿಗೆ ಮಹಾಭಾರತದ ಪ್ರತಿಶ್ಲೋಕಗಳ ಕನ್ನಡ ಅನುವಾದವನ್ನು ಮಾಡಿದರು. ಆದರೆ ಶ್ಲೋಕಗಳ ಜೊತೆಗೆ ಅನುವಾದವನ್ನು ನೀಡದೇ ಕೇವಲ ಕಥಾತ್ಮಕವಾಗಿ ಅನುವಾದವನ್ನು ಮಾಡಿದ್ದಾರೆ. ಅನಂತರ ಭಾರತದರ್ಶನ ಎಂಬ ಸಂಸ್ಥೆಯು ಬೆಂಗಳೂರು ನಗರದಲ್ಲಿ ರಾಮಾನುಜಾಚಾರ್ಯರ ಮತಾನುಯಾಯಿಗಳ ವಿದ್ವಾಂಸರ ಸಹಕಾರದಿಂದ ಮಹಾಭಾರತ ಪ್ರತಿಶ್ಲೋಕಗಳ ಕನ್ನಡ ಅನುವಾದವನ್ನು ೩೨ ಸಂಪುಟಗಳಲ್ಲಿ ಹೊರತಂದಿದೆ. ಅತ್ಯಂತ ಕಡಿಮೆದರದಲ್ಲಿ ಎಲ್ಲರಿಗೂ ತಲುಪಿಸುತ್ತದೆ.

೧೫. ತೆಲುಗು, ತಮಿಳು ಭಾಷೆಗಳಲ್ಲಿಯೂ ಮಹಾಭಾರತದ ಅನುವಾದ ಪುಸ್ತಕಗಳ ಪ್ರಕಟಣೆ.

೧೬. ಪುಣೆಯ ಚಿತ್ರಶಾಲಾ ಪ್ರೆಸ್, ಮಹಾಭಾರತದ ವಿಶ್ವಾಸಾರ್ಹ, ಸಂಪೂರ್ಣ ಪಠ್ಯವನ್ನು ಹೊಂದಿದೆ.

೧೮೫೫-೬೦ರಲ್ಲಿ ನೀಲಕಂಠೀಯ ವ್ಯಾಖ್ಯಾನ ಒಳಗೊಂಡ ಆವೃತ್ತಿ. ತೆಲುಗುಲಿಪಿಯಲ್ಲಿ ಮದ್ರಾಸ್‌ನಲ್ಲಿ ಪ್ರಕಟಣೆ. ಇದೇ ೧೮೬೨ರಲ್ಲಿ ದೇವನಾಗರಿಯಲ್ಲಿ ಪ್ರಕಟಣೆ.

೧೮೮೨ರಲ್ಲಿ ಪ್ರತಾಪ್ ಚಂದರ್ ರೈ ದೇವನಾಗರಿ ಲಿಪಿಯಲ್ಲಿ ಮಹಾಭಾರತ ಪ್ರಕಟಣೆ.

೧೭. ಇಂಗ್ಲೀಷ್‌ಭಾಷೆಯಲ್ಲಿ ಆರು ವಿಸ್ತೃತ ಆವೃತಿಗಳು ಪ್ರಕಟಗೊಂಡಿವೆ

೧೮೮೩-೧೮೯೬ ರಲ್ಲಿ Kisari Mohan Ganguli ರವರಿಂದ ಪ್ರಕಟಣೆ.

೧೮೯೫-೧೯೦೫ ರಲ್ಲಿ ಮನ್ಮಥನಾಥ ದತ್ ರವರಿಂದ ಪ್ರಕಟಣೆ.

೧೯೭೩ J.A.B. Van Buitenen ಚಿಕಾಗೋ ವಿಶ್ವವಿದ್ಯಾಲಯದ ಸಹಯೋಗದಲ್ಲಿ (೩೦ ವರ್ಷಗಳಾದರೂ ಪೂರ್ಣಗೊಂಡಿಲ್ಲ.)

P. Lal and Writers Workshop

Clay Sanskrit Edition (೨೦೦೫ರ ನಂತರ)

೧೯೮೯-೨೦೧೦ರಲ್ಲಿ Vivek Devroy

೧೮. ೧೯೮೦ರಲ್ಲಿ ಬಿ.ಆರ್. ಛೋಪ್ರಾ ಅವರ ಮಹಾಭಾರತ ಜನರ ಮನೆಮಾತಾದ ಡಿಡಿ ೧ರಲ್ಲಿ ಹಿಂದಿ ಭಾಷೆಯಲ್ಲಿ ಪ್ರಸಾರವಾಯಿತು.

೧೯. ಪ್ರಸ್ತುತ ಸಿನಿವಿಸ್ತಾ ಸಂಸ್ಥೆಯ ಕಿಶನ್‌ಸೇಥಿ, ಸಾವಂತ್‌ರ ನಿರ್ದೇಶನದಲ್ಲಿ ಉದಯ ಟಿ.ವಿ.ಯಲ್ಲಿ ಮಹಾಭಾರತ ಕನ್ನಡ ಧಾರಾವಾಹಿ ಹೆಚ್ಚು ಜನಪ್ರಿಯವಾಗಿದೆ.

ಹೀಗೆ ಮಹಾಭಾರತದ ಮೇಲೆ ಅನೇಕ ಕೃತಿಗಳ ಸಂಶೋಧನೆ ಹಾಗೂ ಪ್ರಸಾರದ ಕಾರ್ಯಗಳು ನಮ್ಮ ಭಾರತ ದೇಶದಲ್ಲಿ ಆದ್ಯಂತವಾಗಿ ನಡೆಯುತ್ತಲೇ ಬರುತ್ತಿದೆ.

## ದಾಕ್ಷಿಣಾತ್ಯಪಾಠವೇ ಏಕೆ ಶ್ರೇಷ್ಠ?

ಮುದ್ರಿತವಾದ ಪುಸ್ತಕಗಳಲ್ಲಿ ದಾಕ್ಷಿಣಾತ್ಯಪಾಠ ಮತ್ತು ಔತ್ತರೇಯಪಾಠ ಎಂಬ ಪ್ರಧಾನವಾದ ಎರಡು ಭಾಗಗಳಿವೆ. ಔತ್ತರೇಯಪಾಠವನ್ನು ಸಂಪೂರ್ಣವಾಗಿ ಪರಿಶುದ್ಧವೆಂದು ಸ್ವೀಕರಿಸಲು ಬರುವುದಿಲ್ಲ. ಪಾಶ್ಚಾತ್ಯರ ಆಕ್ರಮಣದಿಂದ ಅಲ್ಲಿರುವ ಶುದ್ಧಪ್ರತಿಗಳೆಲ್ಲವೂ ಯುದ್ಧದ ಸಂದರ್ಭದಲ್ಲಿಯೇ ಹಾಳಾಗಿದ್ದವು. ಆದರೆ ದಕ್ಷಿಣ ದೇಶದ ಕಡೆಗೆ ಹೆಚ್ಚಿನ ವರಸೆಗಳು ಬಾರದ ಕಾರಣ ಶುದ್ಧವಾದ ಪ್ರತಿಗಳು ಉಳಿದಿವೆ. ಮತ್ತು ಲಕ್ಷ ಶ್ಲೋಕಗಳಿಂದ ಕೂಡಿರುವ ಕಾರಣದಿಂದಲೂ, ೮೦೦ ವರ್ಷಗಳ ಹಿಂದೆ ಮಧ್ವಾಚಾರ್ಯರು ಹೇಳಿರುವಂತೆ 'ನಾರಾಯಣಂ ಸುರಗುರುಂ' ಎಂಬ ಮಂಗಳ-ಶ್ಲೋಕದಿಂದಲೇ ತಾಳೆಗರಿಗಳ ಪಾಠವು ಪ್ರಾರಂಭವಾಗು- ವುದರಿಂದಲೂ ಕೂಡ ದಕ್ಷಿಣದೇಶದ ಪಾಠವು ಪರಿಶುದ್ಧವೆಂದು ತಿಳಿಯಬಹುದು.

ಇಷ್ಟೆಲ್ಲಾ ಮುದ್ರಿತವಾದ ಪುಸ್ತಕಗಳ ಮಧ್ಯದಲ್ಲಿ ಮದ್ರಾಸಿನ ವಾವಿಳ್ಳ ರಾಮಸ್ವಾಮಿಯವರ ಪಾಠವು ಹೆಚ್ಚಿನ ಪರಿಶುದ್ಧತೆಯನ್ನು ಪಡೆದಿದೆಯೆಂದು ಹೇಳಬಹುದು. ಪೂನಾ ಭಂಡಾರ್ಕರ್ ಸಂಸ್ಥೆಯು ನೂರಾರು ವಿದ್ವಾಂಸರುಗಳ ಸಹಕಾರದಲ್ಲಿ ೫೦ ವರ್ಷಕ್ಕಿಂತಲೂ ಹೆಚ್ಚಿನ ಸಂಶೋಧನೆಯ ಕಾರ್ಯವನ್ನು ಮಾಡಿದ್ದರೂ ಕೂಡ ಅವರ ಅಭಿಪ್ರಾಯ ಮಹಾಭಾರತದಲ್ಲಿರುವುದು ೨೪೦೦೦ ಶ್ಲೋಕಗಳು. ಉಳಿದ ಶ್ಲೋಕಗಳು ಅನಂತರ ಬೆಳೆದುಬಂದವು. ಈ ದೃಷ್ಟಿಕೋನವನ್ನು ಪಡೆದಿದ್ದಾರೆ. ಮತ್ತು ಶುದ್ಧವಾದ ಪಾಠಗಳನ್ನು ಕ್ರಿಟಿಕಲ್ ಎಡಿಷನ್‌ನಲ್ಲಿ ಪಾಠಾಂತರವನ್ನಾಗಿ ಕೆಳಗಡೆ ನೀಡಿ ಔತ್ತರೇಯಪಾಠವನ್ನೇ ಮುಖ್ಯವನ್ನಾಗಿ ಪರಿಗಣಿಸಿ ಪುಸ್ತಕದ ಮೇಲಗಡೆ ಮುದ್ರಿಸಿರುತ್ತಾರೆ. ಆದ್ದರಿಂದ ಪೂನಾ ಭಂಡಾರ್ಕರ್ ಸಂಸ್ಥೆಯು ಮಾಡಿರುವ ಕಾರ್ಯ ಅತ್ಯಂತ ಪ್ರಶಂಸನೀಯವಾಗಿರುವುದಾದರೂ ಕೂಡ ಯಥಾವತ್ತಾಗಿ ಸ್ವೀಕರಿಸಲು ಕಷ್ಟವಾಗುತ್ತದೆ.

ಟಿ.ಆರ್. ಕೃಷ್ಣಾಚಾರ್ಯರು ಸ್ವತಃ ಮಧ್ವಾಚಾರ್ಯರ ಶಿಷ್ಯಂದಿರ ಪರಂಪರೆಯಲ್ಲಿ ಬಂದಿರುವವರಾಗಿದ್ದರೂ ಕೂಡ ಹೆಚ್ಚಿನ ವಿಮರ್ಶೆಯನ್ನು ಮಾಡಿದಂತೆ ಕಾಣಿಸುವುದಿಲ್ಲ. ಏಕೆಂದರೆ ಅವರ ಪುಸ್ತಕಗಳಲ್ಲಿ ಹತ್ತಾರು ಸಾವಿರ ಶ್ಲೋಕಗಳು ಹೆಚ್ಚು ಮುದ್ರಿತವಾಗಿವೆ. ವಾವಿಳ್ಳ ಅವರ ಪುಸ್ತಕಗಳಲ್ಲಿ ಈ ಯಾವ ಸಮಸ್ಯೆಗಳೂ ಕೂಡ ಇರುವುದಿಲ್ಲ. ಈ ಪಾಠವು ನಮಗೆ ಅತ್ಯಂತ ಹತ್ತಿರವಾಗುತ್ತದೆಂಬ ದೃಷ್ಟಿಯಿಂದ ನಾವು ಮಾಡುತ್ತಿರುವ ಸಂಶೋಧನೆಗೆ ವಾವಿಳ್ಳ ರಾಮಸ್ವಾಮಿಶಾಸ್ತ್ರಿಯವರ ಪ್ರತಿಗಳ ಮೇಲೆ ಸಂಶೋಧನೆಯನ್ನು ನಡೆಸುತ್ತಿದ್ದೇವೆ.

ನಮಗೆ ದೊರೆತಿರುವ ತಾಳೆಗರಿಗಳು ಅತ್ಯಂತ ಪ್ರಾಚೀನವಾಗಿದ್ದರೂ ವಾವಿಳ್ಳ ರಾಮಸ್ವಾಮಿಶಾಸ್ತ್ರಿಯವರ ಪುಸ್ತಕದ ಪಾಠಕ್ಕೆ ಹತ್ತಿರವಾಗಿವೆ. ಆದರೂ ಕೂಡ ರಾಮಸ್ವಾಮಿಯವರು ಮುದ್ರಣ ಮಾಡಿರುವ ಪ್ರತಿಶ್ಲೋಕಗಳಲ್ಲಿಯೂ ಮೂರು ಅಥವಾ ನಾಲ್ಕು ಪದಗಳ ವ್ಯತ್ಯಾಸ ಅಥವಾ ಜೋಡಣೆಗಳು ಇರುತ್ತವೆ.

ಅನೇಕ ವರ್ಷಗಳ ಸಂಶೋಧನೆಯಲ್ಲಿ ಪರಿಣತರಾದ ವಿದ್ವಾನ್ ಬನ್ನಂಜೆಗೋವಿಂದಾಚಾರ್ಯರು ಪೂನಾ ಭಂಡಾರ್ಕರ್ ಸಂಸ್ಥೆಯ ಕಾರ್ಯವನ್ನು ಅತ್ಯಂತ ಪ್ರಶಂಸಿಸುತ್ತಾರೆ. ಆದರೂ ಕೂಡ ವಾವಿಳ್ಳ ರಾಮಸ್ವಾಮಿಯವರ ಪುಸ್ತಕವು ಹೆಚ್ಚು ಗ್ರಾಹ್ಯವೆಂದೂ ಕೂಡ ಉಲ್ಲೇಖಿಸುತ್ತಾರೆ. ಅವರ ಮಾರ್ಗದರ್ಶನದಂತೆ ವಾವಿಳ್ಳ ರಾಮಸ್ವಾಮಿಶಾಸ್ತ್ರಿಯವರ ಪುಸ್ತಕವನ್ನು ಅವಲಂಬಿಸಿ, ತಾಳೆಗರಿಗಳಿಂದ ಪಾಠಾಂತರವನ್ನು ಗಮನಿಸಿ ಪುಸ್ತಕವನ್ನು ಮುದ್ರಣ ಮಾಡುತ್ತಿದ್ದೇವೆ.

ಒಟ್ಟಾರೆ ಹೇಳಬೇಕೆಂದರೆ ವೇದವ್ಯಾಸದೇವರು ಬರೆದಿರುವ ರೀತಿಯಲ್ಲಿಯೇ ಯಥಾವತ್ತಾಗಿ ಮಹಾಭಾರತದ ಶುದ್ಧಪಾಠವನ್ನು ನಾವು ಜಗತ್ತಿಗೆ ನೀಡುತ್ತಿದ್ದೇವೆ ಎಂದು ಹೇಳಲಾರೆವು ಆದರೆ ಇದುವರೆಗೂ ಮುದ್ರಿತವಾದ ಅನೇಕ ಪುಸ್ತಕಗಳ ನಡುವೆ ನಮ್ಮ ಪುಸ್ತಕವು ಹೆಚ್ಚು ಸಂಶೋಧಿತವಾಗಿದೆಯೆಂದು ಎದೆಗಾರಿಕೆಯಲ್ಲಿ ಹೇಳುತ್ತೇವೆ. ಏಕೆಂದರೆ ಮುದ್ರಿತವಾದ ಎಲ್ಲ ಪುಸ್ತಕಗಳಿಗಿಂತಲೂ ಅತ್ಯಂತ ಸ್ವಾರಸ್ಯಪೂರ್ಣವಾದ ಪಾಠಗಳು ನಮ್ಮ ಪುಸ್ತಕಗಳಲ್ಲಿ ಕಾಣಿಸುತ್ತವೆ. ಮತ್ತು ಶ್ರೀವಾದಿರಾಜ ತೀರ್ಥರ ಲಕ್ಷಾಲಂಕಾರ ಎಂಬ ವ್ಯಾಖ್ಯಾನದೊಂದಿಗೆ ಇದುವರೆಗೂ ಯಾರೂ ಕೂಡ ಮೂಲ ಮಹಾಭಾರತವನ್ನು ಸರಿಪಡಿಸಿಲ್ಲ. ಮತ್ತು ತಾತ್ಪರ್ಯನಿರ್ಣಯ ಎಂಬ ಶ್ರೀಮದಾಚಾರ್ಯರ ಗ್ರಂಥದ ಮಾರ್ಗದರ್ಶನವನ್ನು ಯಾರೂ ಕೂಡ ಸ್ವೀಕರಿಸಿಲ್ಲ. ಮೊಟ್ಟಮೊದಲಿಗೆ ಶ್ರೀಪಾದರು ಈ ಮಹಾಸಾಹಸವನ್ನು ಮಾಡಿ ಜಯಶಾಲಿಗಳಾಗುತ್ತಿದ್ದಾರೆ.

## ಸಂಶೋಧಿತ ಹಸ್ತಪ್ರತಿಗಳ ವಿವರಣೆ

ಭಂಡಾರ್ಕರ್ ಓರಿಯೆಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಇವರು ಕಾಶ್ಮೀರದೇಶದ ಶಾರದಾಪ್ರತಿಯನ್ನು ಅವಲಂಬಿಸಿ ಸಂಶೋಧನೆ ಮಾಡಿದ್ದಾರೆ. ಕಲ್ಕತ್ತಾ ನಗರದಲ್ಲಿ ಪ್ರಕಟಣೆಯಾದ ಪುಸ್ತಕದಲ್ಲಿ ಆದಿಪರ್ವವು ೮೪೦೦ ಶ್ಲೋಕದಿಂದ ಕೂಡಿದೆ. ಮುಂಬೈ ಪ್ರಕಟಣೆಯಲ್ಲಿ ೮೬೨೦ ಶ್ಲೋಕಗಳಿವೆ. ಮದ್ರಾಸ್ ವಾವಿಳ್ಳ ಪ್ರಕಟಣೆಯಲ್ಲಿ ೯೯೮೪ ಶ್ಲೋಕಗಳಿವೆ. ಆದರೆ ಕಾಶ್ಮೀರದ ಶಾರದಾ ಪ್ರತಿಯಲ್ಲಿ ೭೯೮೪ ಶ್ಲೋಕಗಳು ಮಾತ್ರ ಅತ್ಯಂತ ಕಡಿಮೆಯಾಗಿ ಇರುತ್ತವೆ. ಆದರೂ ಬೋರಿಯವರು ಶಾರದಾ ಪ್ರಕಟಣೆಯೇ ಸರಿ ಎಂದು ನಿರ್ಣಯಿಸುತ್ತಾರೆ. ಮತ್ತು ಆದಿಪರ್ವದ ದೇವನಾಗರಿ ಲಿಪಿಯ ಒಂದು ಪೂರ್ಣಪ್ರತಿಯನ್ನೂ ಕೂಡ ಇವರು ಆಧಾರವನ್ನಾಗಿ ಬಳಸಿದ್ದಾರೆ.

ಕಾಶ್ಮೀರದ ಶಾರದಾಪ್ರತಿಯಲ್ಲಿ ಕೆಲವು ಪ್ರಸಿದ್ಧವಾದ ಮಹಾಭಾರತದ ಭಾಗಗಳೇ ಕಾಣಿಸುವುದಿಲ್ಲ.

೧. ದುಶ್ಶಲೆಯ ಜನನ, ೨. ಅಶ್ವತ್ಥಾಮನಿಗೆ ಹಿಟ್ಟಿನ ನೀರನ್ನು ಕುಡಿಸುವ ಪ್ರಕರಣ, ೩. ಗಣೇಶನು ಮಹಾಭಾರತವನ್ನು ಬರೆದನು ಎಂಬ ಪ್ರಕರಣ ಮೊದಲಾದವು.

ವಾವಿಳ್ಳ ರಾಮಸ್ವಾಮಿಯವರು ತಂಜಾವೂರು ಜಿಲ್ಲೆಯ ಪ್ರತಿಯನ್ನು ಆಧಾರವನ್ನಾಗಿಟ್ಟುಕೊಂಡಿದ್ದಾರೆ. ಟಿ.ಆರ್. ಕೃಷ್ಣಾಚಾರ್ಯರು ದಕ್ಷಿಣದೇಶದ ಹಸ್ತಪ್ರತಿಯನ್ನಷ್ಟೇ ಉಲ್ಲೇಖಿಸುತ್ತಾರೆ.

**ತತ್ರ ತಾನ್ ವಾಸಯಾಮಾಸ ಪಾಂಡವಾನಂಬಿಕಾಸುತಃ ।**
**ಸುತಪ್ರಿಯೈಷೀ ತಾನ್ ರಾಜಾ ಪಾಂಡವಾನಮಿತೌಜಸಃ ॥೧೯॥**

ತನ್ನ ಮಕ್ಕಳಿಗೆ ಹಿತವನ್ನು ಬಯಸುವ ಅಂಬಿಕಾಸುತನಾದ ಧೃತರಾಷ್ಟ್ರನು ಅಮಿತ ಪರಾಕ್ರಮಿಗಳಾದ ಆ ಪಾಂಡವರನ್ನು ಅರಗಿನ ಮನೆಯಲ್ಲಿ ವಾಸಮಾಡಿಸಿದನು.

**ತತೋ ವಿವಾಸಯಾಮಾಸ ರಾಜ್ಯಭೋಗಬುಭುಕ್ಷಯಾ ।**
**ಪ್ರಸ್ಥಾನೇ ಚಾಭವನ್ಮಿತ್ರಂ ಕ್ಷತ್ತಾ ತೇಷಾಂ ಮಹಾತ್ಮನಾಮ್ ॥೨೦॥**

ಅನಂತರ ರಾಜ್ಯವನ್ನು ಭೋಗಿಸುವ ಇಚ್ಛೆಯಿಂದ ಪಾಂಡವರನ್ನು ಹಸ್ತಿನಾವತಿಯಿಂದ ವಾರಣಾವತಕ್ಕೆ ಕಳುಹಿಸಿದನು. ಮಹಾತ್ಮರಾದ ಪಾಂಡವರ ಪ್ರಯಾಣದ ಸಮಯದಲ್ಲಿ ವಿದುರನು ಅವರಿಗೆ ಮಿತ್ರನಾಗಿ ವರ್ತಿಸಿದನು.

**ತೇ ಪ್ರಾತಿಷ್ಠನ್ ನಗರಾತ್ ಸಹಿತಾ ನಾಗಸಾಹ್ವಯಾತ್ ।**
**ತತಃ ಸಂಪ್ರಾಪ್ಯ ಕೌಂತೇಯಾ ನಗರಂ ವಾರಣಾವತಮ್ ॥೨೧॥**

**ನ್ಯವಸಂತ ಮಹಾತ್ಮಾನೋ ಮಾತ್ರಾ ಸಹ ಪರಂತಪಾಃ ।**
**ಆದೀಪ್ಯ ಜಾತುಷಂ ವೇಶ್ಮ ದಗ್ಧ್ವಾ ತತ್ರ ಪುರೋಚನಮ್ ॥೨೨॥**

ಪಾಂಡವರೆಲ್ಲರೂ ಒಟ್ಟಿಗೆ ಹಸ್ತಿನಾವತಿನ್ನು ಬಿಟ್ಟು ವಾರಣಾವತವನ್ನು ತಲುಪಿ ತಾಯಿಯ ಜೊತೆಯಲ್ಲಿ ಅಲ್ಲಿ ವಾಸಮಾಡಿದರು. ಅನಂತರ ಸೂಕ್ತಸಮಯದಲ್ಲಿ ಅರಗಿನ ಮನೆಗೆ ಅಗ್ನಿಯನ್ನು ಕೊಟ್ಟು ಪುರೋಚನನನ್ನು ಸುಟ್ಟು (ಅಲ್ಲಿಂದ ತೆರಳಿದರು)

**ಮಾರ್ಗಭೋಜೀವ ಲೋಕಸ್ಯ ಯಥಾ ಶುಕ್ರಃ ಸುಖಾವಹಃ ।**
**ಪಾಂಡವಾನಾಂ ತಥಾ ನಿತ್ಯಂ ವಿದುರೋಽಭೂತ್ ಸುಖಾವಹಃ ॥೨೩॥**

ಮಾರ್ಗತಿಳಿಯದವರಿಗೆ ಹೇಗೆ ಆಕಾಶದಲ್ಲಿ ಶುಕ್ರನು ತನ್ನ ಪ್ರಕಾಶದಿಂದ ಸುಖವನ್ನುಂಟುಮಾಡುತ್ತಾನೆಯೋ ಹಾಗೆ ವಿದುರನು ಪಾಂಡವರಿಗೆ ಯಾವಾಗಲೂ ಸುಖಕರನಾಗಿದ್ದನು.

**ಸ ದಾಹಯಚ್ಚ ವಿಸ್ರಬ್ಧಾನ್ ಪಾವಕೇನ ಪುನಸ್ತದಾ ।**
**ವಿದುರಸ್ಯೈವ ವಚನಾತ್ ಖನಿತ್ರೀ ವಿಹಿತಾ ತತಃ ॥೨೪॥**

ವಿದುರನೇ, ನಿಶ್ಚಿಂತೆಯಿಂದ ಮಲಗಿದ್ದ ಪುರೋಚನ ಮೊದಲಾದವರನ್ನು ಭೀಮಸೇನನಿಂದ ಸುಡಿಸಿದನು. ವಿದುರನ ಮಾತಿನಂತೆಯೇ ಅರಗಿನ ಮನೆಯಿಂದ ಹೊರಗೆ ಹೋಗುವುದಕ್ಕೆ ಒಂದು ಸುರಂಗವನ್ನು ನಿರ್ಮಿಸಲಾಗಿದ್ದಿತು.

ಮೋಕ್ಷಯಾಮಾಸ ವೇಗೇನ ತೇ ಮುಕ್ತಾಃ ಪ್ರಾದ್ರವನ್ ಭಯಾತ್ ।
ತತೋ ಮಹಾವನೇ ಘೋರೇ ಹಿಡಿಂಬಂ ನಾಮ ರಾಕ್ಷಸಮ್ ॥೨೫॥

ಭೀಮಸೇನೋಽವಧೀತ್ ಕ್ರುದ್ಧೋ ಭುವಿ ಭೀಮಪರಾಕ್ರಮಃ ।
ಪ್ರಾಪ್ತಾ ಹಿಡಿಂಬೀ ಭೀಮೇನ ಯತ್ರ ಜಾತೋ ಘಟೋತ್ಕಚಃ ॥೨೬॥

ವಿದುರನು ಶೀಘ್ರವಾಗಿ ಅವರನ್ನು ಅರಗಿನ ಮನೆಯ ಅಪಾಯದಿಂದ ಪಾರುಮಾಡಿದನು. ಮುಕ್ತರಾದ ಅವರು ಭಯದಿಂದ ವೇಗವಾಗಿ ಓಡಿ ದೊಡ್ಡಕಾಡಿನಲ್ಲಿ ಹಿಡಿಂಬನೆಂಬ ರಾಕ್ಷಸನನ್ನು ಸಂಧಿಸಿದರು. ಭೂಮಿಯಲ್ಲಿ ಭಯಂಕರವಾದ ಪರಾಕ್ರಮವುಳ್ಳ ಭೀಮಸೇನನು ಕ್ರುದ್ಧನಾಗಿ ಹಿಡಿಂಬನನ್ನು ಸಂಹಾರಮಾಡಿ ಹಿಡಿಂಬಿಯನ್ನು ಪತ್ನಿಯಾಗಿ ಸ್ವೀಕರಿಸಿದನು. ಅವಳಲ್ಲಿ ಘಟೋತ್ಕಚನ ಜನನವಾಯಿತು.

ಅಥ ಸಂಧಾಯ ತೇ ವೀರಾ ಏಕಚಕ್ರಾಂ ವ್ರಜಂಸ್ತದಾ ।
ಬ್ರಹ್ಮರೂಪಧರಾ ಭೂತ್ವಾ ಮಾತ್ರಾ ಸಹ ಪರಂತಪಾಃ ॥೨೭॥

ಅನಂತರ ಕ್ಷತ್ರಿಯವೇಷವನ್ನು ಮರೆಮಾಚುವುದಕ್ಕೆ ಎಲ್ಲರೂ ಸಮ್ಮತಿಸಿ ಬ್ರಾಹ್ಮಣವೇಷವನ್ನು ಧರಿಸಿ ತಾಯಿಯ ಜೊತೆಯಲ್ಲಿ ಏಕಚಕ್ರನಗರವನ್ನು ಸೇರಿದರು.

ತತ್ರ ತೇ ಬ್ರಾಹ್ಮಣಾರ್ಥಾಯ ಬಕಂ ಹತ್ವಾ ಮಹಾಬಲಮ್ ।
ಬ್ರಾಹ್ಮಣೈಃ ಸಹಿತಾ ಜಗ್ಮುಃ ಪಾಂಚಾಲಾನಾಂ ಪುರಂ ತತಃ ॥೨೮॥

ಅಲ್ಲಿ ಅವರು ಆಶ್ರಯವನ್ನು ಕೊಟ್ಟ ಬ್ರಾಹ್ಮಣನ ಸಲುವಾಗಿ ಮಹಾಬಲಿಷ್ಠನಾದ ಬಕಾಸುರನನ್ನು ಕೊಂದು ಅಲ್ಲಿಂದ ಬ್ರಾಹ್ಮಣರ ಜೊತೆಯಲ್ಲಿ ಪಾಂಚಾಲರಾಜನಾದ ದ್ರುಪದನ ಪಟ್ಟಣಕ್ಕೆ ಹೋದರು.

ತತ್ರ ತೇ ದ್ರೌಪದೀಂ ಲಬ್ಧ್ವಾ ಬಹೂನ್ ಮಾಸಾನ್ ಸುಖೋಷಿತಾಃ ।
ಸಹಿತಾ ಹಸ್ತಿನಪುರಂ ಪ್ರತ್ಯಾಜಗ್ಮುರರಿಂದಮಾಃ ॥೨೯॥

ಅಲ್ಲಿ ಅವರು ದ್ರೌಪದಿಯನ್ನು ಪಡೆದು ಅನೇಕ ತಿಂಗಳುಗಳಕಾಲ ಸುಖವಾಗಿ ವಾಸಿಸಿ ಶತ್ರುದಮನಶೀಲರಾಗಿ ಎಲ್ಲರೂ ಜೊತೆಯಲ್ಲಿ ಹಸ್ತಿನಪುರಕ್ಕೆ ಹಿಂದಿರುಗಿದರು.

ಉಕ್ತಾಸ್ತೇ ಧೃತರಾಷ್ಟ್ರೇಣ ರಾಜ್ಞಾ ಶಾಂತನವೇನ ಚ ।
ಭ್ರಾತೃಭಿರ್ವಿಗ್ರಹಸ್ತಾತ ಕಥಂ ವೋ ನ ಭವೇದಿತಿ ॥೩೦॥

ತಸ್ಮಾಜ್ಜನಪದೋಪೇತಂ ಸುವಿಭಕ್ತಮಹಾಪಥಮ್ ।
ವಾಸಾಯ ಖಾಂಡವಪ್ರಸ್ಥೇ ವ್ರಜಧ್ವಂ ಗತಮನ್ಯವಃ ॥೩೧॥

ಅಲ್ಲಿ ಅವರಿಗೆ ಭೀಷ್ಮನೂ ಮತ್ತು ಧೃತರಾಷ್ಟ್ರನೂ ಸಹ ಅಣ್ಣತಮ್ಮಂದಿರಿಗೆ ವಿರೋಧವಾಗದಿರುವ ಉದ್ದೇಶದಿಂದ ಒಳ್ಳೆಯ ಮಾರ್ಗಗಳಿಂದ ಕೂಡಿದ ಮತ್ತು ಸತ್ಪುರುಷರಿಂದ ಕೂಡಿದ ಇಂದ್ರಪ್ರಸ್ಥಕ್ಕೆ ಏನೂ ಬೇಸರ ಅಥವಾ ಕೋಪವನ್ನು ಮಾಡಿಕೊಳ್ಳದೆ ವಾಸಿಸಲು ಹೋಗಿ ಎಂದು ಹೇಳಲ್ಪಟ್ಟರು.

ತಯೋಸ್ತೇ ವಚನಾಜ್ಜಗ್ಮುಃ ಸಹ ಸರ್ವೈಃ ಸುಹೃಜ್ಜನೈಃ ।
ನಗರಂ ಖಾಂಡವಪ್ರಸ್ಥಂ ರತ್ನಮಾದಾಯ ಭಾಗಶಃ ॥೩೨॥

ಅವರಿಬ್ಬರ ಮಾತಿನಂತೆ ಪಾಂಡವರು ಕೋಶದಿಂದ ಸ್ವಲ್ಪಭಾಗ ರತ್ನವನ್ನು ತೆಗೆದುಕೊಂಡು ತಮ್ಮ ಎಲ್ಲಾ ಹಿತೈಷಿಗಳ ಜೊತೆಯಲ್ಲಿ ಖಾಂಡವಪ್ರಸ್ಥಕ್ಕೆ ಹೋದರು.

ತತ್ರ ತೇ ನ್ಯವಸನ್ ರಾಜನ್ ಸಂವತ್ಸರಗಣಾನ್ ಬಹೂನ್ ।
ವಶೇ ಶಸ್ತ್ರಪ್ರತಾಪೇನ ಕುರ್ವಂತೋಽನ್ಯಾನ್ ಮಹೀಕ್ಷಿತಃ ॥೩೩॥

ಏವಂ ಧರ್ಮಪ್ರಧಾನಾಸ್ತೇ ಸತ್ಯವ್ರತಪರಾಯಣಾಃ ।
ಅಪ್ರಮತ್ತಾಃ ಸ್ಥಿತಾಃ ಕ್ಷಾತ್ರಾಃ ಪ್ರತಪಂತೋಽಹಿತಾನ್ ಬಲಾತ್ ॥೩೪॥

ಅಲ್ಲಿ ಅವರು ಅನೇಕ ವರ್ಷಗಳಕಾಲ ತಮ್ಮ ಶಸ್ತ್ರಪ್ರತಾಪದಿಂದ ಬೇರೆ ರಾಜರನ್ನು ವಶಪಡಿಸಿಕೊಂಡು ಧರ್ಮವನ್ನಾಚರಿಸುತ್ತಾ ಸತ್ಯವ್ರತಪರಾಯಣರಾಗಿ ಕ್ಷತ್ರಿಯಧರ್ಮದಿಂದ ಎಂದೂ ಚ್ಯುತರಾಗದೆ ತಮ್ಮ ಬಲದಿಂದ ಶತ್ರುಗಳನ್ನು ಪೀಡಿಸುತ್ತಾ ವಾಸಮಾಡಿದರು.

ಅಜಯದ್ ಭೀಮಸೇನಸ್ತು ದಿಶಂ ಪ್ರಾಚೀಂ ಮಹಾಬಲಃ ।
ಉದೀಚೀಮರ್ಜುನೋ ವೀರಃ ಪ್ರತೀಚೀಂ ನಕುಲಸ್ತಥಾ ॥೩೫॥

ಮಹಾಬಲನಾದ ಭೀಮಸೇನನು ಪೂರ್ವದಿಕ್ಕನ್ನು ಜಯಿಸಿದನು. ವೀರನಾದ ಅರ್ಜುನನು ಉತ್ತರದಿಕ್ಕನ್ನು ಹಾಗೆಯೇ ನಕುಲನು ಪಶ್ಚಿಮ ದಿಕ್ಕನ್ನೂ ಜಯಿಸಿದರು.

**ದಕ್ಷಿಣಾಂ ಸಹದೇವಸ್ತು ವಿಜಿಗ್ಯೇ ಪರವೀರಹಾ ।**
**ಏವಂ ಚಕ್ರುರಿಮಾಂ ಸರ್ವೇ ವಶೇ ಕೃತ್ಸ್ನಾಂ ವಸುಂಧರಾಮ್ ॥೩೬॥**

ಶತ್ರುವೀರರನ್ನು ಸಂಹರಿಸುವ ಸಹದೇವನು ದಕ್ಷಿಣ ದಿಕ್ಕನ್ನು ಜಯಿಸಿದನು. ಹೀಗೆ ಅವರೆಲ್ಲರೂ ಸೇರಿ ಸಮಗ್ರವಾದ ಭೂಮಿಯನ್ನು ತಮ್ಮ ವಶಮಾಡಿಕೊಂಡರು.

**ಪಂಚಭಿಃ ಸೂರ್ಯಸಂಕಾಶೈಃ ಸೂರ್ಯೇಣ ಚ ವಸುಂಧರಾ ।**
**ಷಟ್‌ಸೂರ್ಯೇವ ಚ ಬಭ್ರಾಜೇ ಪಾಂಡವೈಃ ಸತ್ಯವಿಕ್ರಮೈಃ ॥೩೭॥**

ಸತ್ಯವಿಕ್ರಮರಾದ ಐದು ಸೂರ್ಯರಂತೆ ಬೆಳಗುವ ಆ ಪಾಂಡವರಿಂದ ಮತ್ತು ಆಕಾಶದಲ್ಲಿ ಬೆಳಗುವ ಸೂರ್ಯನಿಂದ ಕೂಡಿ ಜಗತ್ತು ಆರು ಸೂರ್ಯರನ್ನು ಹೊಂದಿದಂತೆ ಶೋಭಿಸಿತು.

**ತತೋ ನಿಮಿತ್ತೇ ಕಸ್ಮಿಂಶ್ಚಿದ್ ಧರ್ಮರಾಜೋ ಯುಧಿಷ್ಠಿರಃ ।**
**ವನಂ ಪ್ರಸ್ಥಾಪಯಾಮಾಸ ಭ್ರಾತರಂ ವೈ ಧನಂಜಯಮ್ ॥೩೮॥**

ಅನಂತರ ಯಾವುದೋ ಒಂದು ಕಾರಣಕ್ಕಾಗಿ ಧರ್ಮರಾಜನು ತನ್ನ ತಮ್ಮನಾದ ಅರ್ಜುನನನ್ನು ವನವಾಸಕ್ಕೆ ಕಳುಹಿಸಿದನು.

**ಧೈರ್ಯಾತ್ ಧರ್ಮಾಚ್ಚ ಸತ್ಯಾಚ್ಚ ವಿಜಯಾಚ್ಚಾಧಿಕಪ್ರಿಯಮ್ ।**
**ಅರ್ಜುನೋ ಭ್ರಾತರಂ ಜ್ಯೇಷ್ಠಂ ನಾತ್ಯವರ್ತತ ಜಾತುಚಿತ್ ॥೩೯॥**

ಧೈರ್ಯದಿಂದ, ಧರ್ಮದಿಂದ, ಸತ್ಯದಿಂದ ಮತ್ತು ವಿಜಯದಿಂದ ಅಣ್ಣನಾದ ಧರ್ಮರಾಜನನ್ನು ಅರ್ಜುನನು ಎಂದೂ ಮೀರುತ್ತಿರಲಿಲ್ಲ.

**ಸ ವೈ ಸಂವತ್ಸರಂ ಪೂರ್ಣಂ ಮಾಸಂ ಚೈವ ವನೇ ವಸನ್ ।**
**ತೀರ್ಥಯಾತ್ರಾಂ ಚ ಕೃತವಾನ್ ನಾಗಕನ್ಯಾಮವಾಪ್ಯ ಚ ॥೪೦॥**

ಅವನು ಒಟ್ಟು ಹದಿಮೂರು ತಿಂಗಳ ಕಾಲ ವನವಾಸವನ್ನು ಮಾಡಿ ತೀರ್ಥಯಾತ್ರೆಯನ್ನು ಮಾಡಿ ನಾಗಕನ್ಯೆಯಾದ ಉಲೂಪಿಯನ್ನು ಪತ್ನಿಯಾಗಿ ಪಡೆದನು.

ಅಲ್ಲಿ ಅವರು ದ್ರೌಪದಿಯನ್ನು ಪಡೆದು ಅನೇಕ ತಿಂಗಳುಗಳಕಾಲ ಸುಖವಾಗಿ ವಾಸಿಸಿ ಶತ್ರುದಮನಶೀಲರಾಗಿ ಎಲ್ಲರೂ ಜೊತೆಯಲ್ಲಿ ಹಸ್ತಿನಪುರಕ್ಕೆ ಹಿಂದಿರುಗಿದರು.

ಉಕ್ತಾಸ್ತೇ ಧೃತರಾಷ್ಟ್ರೇಣ ರಾಜ್ಞಾ ಶಾಂತನವೇನ ಚ ।
ಭ್ರಾತೃಭಿರ್ವಿಗ್ರಹಸ್ತಾತ ಕಥಂ ವೋ ನ ಭವೇದಿತಿ ॥೩೦॥

ತಸ್ಮಾಜ್ಜನಪದೋಪೇತಂ ಸುವಿಭಕ್ತಮಹಾಪಥಮ್ ।
ವಾಸಾಯ ಖಾಂಡವಪ್ರಸ್ಥೇ ವ್ರಜಧ್ವಂ ಗತಮನ್ಯವಃ ॥೩೧॥

ಅಲ್ಲಿ ಅವರಿಗೆ ಭೀಷ್ಮನೂ ಮತ್ತು ಧೃತರಾಷ್ಟ್ರನೂ ಸಹ ಅಣ್ಣತಮ್ಮಂದಿರಿಗೆ ವಿರೋಧವಾಗದಿರುವ ಉದ್ದೇಶದಿಂದ ಒಳ್ಳೆಯ ಮಾರ್ಗಗಳಿಂದ ಕೂಡಿದ ಮತ್ತು ಸತ್ಪುರುಷರಿಂದ ಕೂಡಿದ ಇಂದ್ರಪ್ರಸ್ಥಕ್ಕೆ ಏನೂ ಬೇಸರ ಅಥವಾ ಕೋಪವನ್ನು ಮಾಡಿಕೊಳ್ಳದೆ ವಾಸಿಸಲು ಹೋಗಿ ಎಂದು ಹೇಳಲ್ಪಟ್ಟರು.

ತಯೋಸ್ತೇ ವಚನಾಜ್ಜಗ್ಮುಃ ಸಹ ಸರ್ವೈಃ ಸುಹೃಜ್ಜನೈಃ ।
ನಗರಂ ಖಾಂಡವಪ್ರಸ್ಥಂ ರತ್ನಮಾದಾಯ ಭಾಗಶಃ ॥೩೨॥

ಅವರಿಬ್ಬರ ಮಾತಿನಂತೆ ಪಾಂಡವರು ಕೋಶದಿಂದ ಸ್ವಲ್ಪಭಾಗ ರತ್ನವನ್ನು ತೆಗೆದುಕೊಂಡು ತಮ್ಮ ಎಲ್ಲಾ ಹಿತೈಷಿಗಳ ಜೊತೆಯಲ್ಲಿ ಖಾಂಡವಪ್ರಸ್ಥಕ್ಕೆ ಹೋದರು.

ತತ್ರ ತೇ ನ್ಯವಸನ್ ರಾಜನ್ ಸಂವತ್ಸರಗಣಾನ್ ಬಹೂನ್ ।
ವಶೇ ಶಸ್ತ್ರಪ್ರತಾಪೇನ ಕುರ್ವಂತೋಽನ್ಯಾನ್ ಮಹೀಕ್ಷಿತಃ ॥೩೩॥

ಏವಂ ಧರ್ಮಪ್ರಧಾನಾಸ್ತೇ ಸತ್ಯವ್ರತಪರಾಯಣಾಃ ।
ಅಪ್ರಮತ್ತಾಃ ಸ್ಥಿತಾಃ ಕ್ಷಾತ್ರಾಃ ಪ್ರತಪಂತೋಽಹಿತಾನ್ ಬಲಾತ್ ॥೩೪॥

ಅಲ್ಲಿ ಅವರು ಅನೇಕ ವರ್ಷಗಳಕಾಲ ತಮ್ಮ ಶಸ್ತ್ರಪ್ರತಾಪದಿಂದ ಬೇರೆ ರಾಜರನ್ನು ವಶಪಡಿಸಿಕೊಂಡು ಧರ್ಮವನ್ನಾಚರಿಸುತ್ತಾ ಸತ್ಯವ್ರತಪರಾಯಣರಾಗಿ ಕ್ಷತ್ರಿಯಧರ್ಮದಿಂದ ಎಂದೂ ಚ್ಯುತರಾಗದೆ ತಮ್ಮ ಬಲದಿಂದ ಶತ್ರುಗಳನ್ನು ಪೀಡಿಸುತ್ತಾ ವಾಸಮಾಡಿದರು.

ಅಜಯದ್ ಭೀಮಸೇನಸ್ತು ದಿಶಂ ಪ್ರಾಚೀಂ ಮಹಾಬಲಃ ।
ಉದೀಚೀಮರ್ಜುನೋ ವೀರಃ ಪ್ರತೀಚೀಂ ನಕುಲಸ್ತಥಾ ॥೩೫॥

ಮಹಾಬಲನಾದ ಭೀಮಸೇನನು ಪೂರ್ವದಿಕ್ಕನ್ನು ಜಯಿಸಿದನು. ವೀರನಾದ ಅರ್ಜುನನು ಉತ್ತರದಿಕ್ಕನ್ನು ಹಾಗೆಯೇ ನಕುಲನು ಪಶ್ಚಿಮ ದಿಕ್ಕನ್ನೂ ಜಯಿಸಿದರು.

**ದಕ್ಷಿಣಾಂ ಸಹದೇವಸ್ತು ವಿಜಿಗ್ಯೇ ಪರವೀರಹಾ ।**
**ಏವಂ ಚಕ್ರುರಿಮಾಂ ಸರ್ವೇ ವಶೇ ಕೃತ್ಸ್ನಾಂ ವಸುಂಧರಾಮ್ ॥೩೬॥**

ಶತ್ರುವೀರರನ್ನು ಸಂಹರಿಸುವ ಸಹದೇವನು ದಕ್ಷಿಣ ದಿಕ್ಕನ್ನು ಜಯಿಸಿದನು. ಹೀಗೆ ಅವರೆಲ್ಲರೂ ಸೇರಿ ಸಮಗ್ರವಾದ ಭೂಮಿಯನ್ನು ತಮ್ಮ ವಶಮಾಡಿಕೊಂಡರು.

**ಪಂಚಭಿಃ ಸೂರ್ಯಸಂಕಾಶೈಃ ಸೂರ್ಯೇಣ ಚ ವಸುಂಧರಾ ।**
**ಷಟ್‌ಸೂರ್ಯೇವ ಚ ಬಭ್ರಾಜೇ ಪಾಂಡವೈಃ ಸತ್ಯವಿಕ್ರಮೈಃ ॥೩೭॥**

ಸತ್ಯವಿಕ್ರಮರಾದ ಐದು ಸೂರ್ಯರಂತೆ ಬೆಳಗುವ ಆ ಪಾಂಡವರಿಂದ ಮತ್ತು ಆಕಾಶದಲ್ಲಿ ಬೆಳಗುವ ಸೂರ್ಯನಿಂದ ಕೂಡಿ ಜಗತ್ತು ಆರು ಸೂರ್ಯರನ್ನು ಹೊಂದಿದಂತೆ ಶೋಭಿಸಿತು.

**ತತೋ ನಿಮಿತ್ತೇ ಕಸ್ಮಿಂಶ್ಚಿದ್ ಧರ್ಮರಾಜೋ ಯುಧಿಷ್ಠಿರಃ ।**
**ವನಂ ಪ್ರಸ್ಥಾಪಯಾಮಾಸ ಭ್ರಾತರಂ ವೈ ಧನಂಜಯಮ್ ॥೩೮॥**

ಅನಂತರ ಯಾವುದೋ ಒಂದು ಕಾರಣಕ್ಕಾಗಿ ಧರ್ಮರಾಜನು ತನ್ನ ತಮ್ಮನಾದ ಅರ್ಜುನನನ್ನು ವನವಾಸಕ್ಕೆ ಕಳುಹಿಸಿದನು.

**ಧೈರ್ಯಾತ್ ಧರ್ಮಾಚ್ಚ ಸತ್ಯಾಚ್ಚ ವಿಜಯಾಚ್ಚಾಧಿಕಪ್ರಿಯಮ್ ।**
**ಅರ್ಜುನೋ ಭ್ರಾತರಂ ಜ್ಯೇಷ್ಠಂ ನಾತ್ಯವರ್ತತ ಜಾತುಚಿತ್ ॥೩೯॥**

ಧೈರ್ಯದಿಂದ, ಧರ್ಮದಿಂದ, ಸತ್ಯದಿಂದ ಮತ್ತು ವಿಜಯದಿಂದ ಅಣ್ಣನಾದ ಧರ್ಮರಾಜನನ್ನು ಅರ್ಜುನನು ಎಂದೂ ಮೀರುತ್ತಿರಲಿಲ್ಲ.

**ಸ ವೈ ಸಂವತ್ಸರಂ ಪೂರ್ಣಂ ಮಾಸಂ ಚೈವ ವನೇ ವಸನ್ ।**
**ತೀರ್ಥಯಾತ್ರಾಂ ಚ ಕೃತವಾನ್ ನಾಗಕನ್ಯಾಮವಾಪ್ಯ ಚ ॥೪೦॥**

ಅವನು ಒಟ್ಟು ಹದಿಮೂರು ತಿಂಗಳ ಕಾಲ ವನವಾಸವನ್ನು ಮಾಡಿ ತೀರ್ಥಯಾತ್ರೆಯನ್ನು ಮಾಡಿ ನಾಗಕನ್ಯೆಯಾದ ಉಲೂಪಿಯನ್ನು ಪತ್ನಿಯಾಗಿ ಪಡೆದನು.

ಅಥ ಪಾಂಡ್ಯಸ್ಯ ತನಯಾಮವಾಪ್ಯ ಸ ಧನಂಜಯಃ ।
ತತೋಽಗಚ್ಛದ್ಧೃಷೀಕೇಶಂ ದ್ವಾರವತ್ಯಾಂ ಕದಾಚನ ॥೪೧॥

ಅನಂತರ ಪಾಂಡ್ಯದೇಶದ ರಾಜಕುಮಾರಿಯಾದ ಚಿತ್ರಾಂಗದೆಯನ್ನು ಪತ್ನಿಯಾಗಿ ಪಡೆದು ಅರ್ಜುನನು ಕಾಲಕ್ರಮದಲ್ಲಿ ದ್ವಾರಕೆಗೆ ಹೋಗಿ ಕೃಷ್ಣನನ್ನು ಕಂಡನು.

ತತ್ರ ಲೇಭೇ ಚ ಬೀಭತ್ಸುರ್ಭಾರ್ಯಾಂ ರಾಜೀವಲೋಚನಾಮ್ ।
ಅನುಜಾಂ ವಾಸುದೇವಸ್ಯ ಸುಭದ್ರಾಂ ಭದ್ರಭಾಷಿಣೀಮ್ ॥೪೨॥

ಅಲ್ಲಿ ಅವನು ಕೃಷ್ಣನ ತಂಗಿಯಾದ ಮಂಜುಭಾಷಿಣಿಯೂ, ಕಮಲನಯನೆಯೂ ಆದ ಸುಭದ್ರೆಯನ್ನು ಪತ್ನಿಯಾಗಿ ಪಡೆದನು.

ಸಾ ಶಚೀವ ಮಹೇಂದ್ರೇಣ ಶ್ರೀಃ ಕೃಷ್ಣೇನೇವ ಸಂಗತಾ ।
ಸುಭದ್ರಾ ಯುಯುಜೇ ಪ್ರೀತಾ ಪಾಂಡವೇನಾರ್ಜುನೇನ ಚ ॥೪೩॥

ಸುಭದ್ರೆಯು ಅರ್ಜುನನನ್ನು ಹೊಂದಿ ಇಂದ್ರನ ಜೊತೆಯಲ್ಲಿ ಕೂಡಿದ ಶಚಿಯಂತೆ, ನಾರಾಯಣನನ್ನು ಸೇರಿದ ಲಕ್ಷ್ಮಿಯಂತೆ ಶೋಭಿಸಿದಳು.

ತತ್ರ ಸಂತರ್ಪಯಾಮಾಸ ಕೌಂತೇಯೋ ಹವ್ಯವಾಹನಮ್ ।
ಬೀಭತ್ಸುರ್ವಾಸುದೇವೇನ ಸಹಿತಃ ಖಾಂಡವೇ ವನೇ ॥೪೪॥

ಅಲ್ಲಿ ಅರ್ಜುನನು ಕೃಷ್ಣನಿಂದ ಸಹಿತನಾಗಿ ಖಾಂಡವವನದಲ್ಲಿ ಅಗ್ನಿದೇವನನ್ನು ತೃಪ್ತಿಪಡಿಸಿದನು.

ನಾತಿಭಾರೋಽಥ ಪಾರ್ಥಸ್ಯ ಕೇಶವೇನಾಭವತ್ ಸಹ ।
ವ್ಯವಸಾಯದ್ವಿತೀಯೇನ ವಿಷ್ಣೋಃ ಶತ್ರುವಧೇಷ್ವಿವ ॥೪೫॥

ಅರ್ಜುನನಿಗೆ ಆ ಕಾರ್ಯವು ಕೃಷ್ಣನ ಸಹಾಯವಿದ್ದ ಕಾರಣದಿಂದ ಕೃಷ್ಣನಿಗೆ ಕಂಸಾದಿಶತ್ರುವಧೆಯು ಅನಾಯಾಸವಾಗಿ ಜರುಗಿದಂತೆ, ಹೆಚ್ಚು ಪ್ರಯತ್ನವಿಲ್ಲದೆಯೇ ಜರುಗಿತು.

ಪಾರ್ಥಾಯಾಗ್ನಿರ್ದದೌ ತತ್ರ ಗಾಂಡೀವಂ ಧನುರುತ್ತಮಮ್ ।
ಇಷುಧೀ ಚಾಕ್ಷಯೌ ಬಾಣೈ ರಥಂ ಚ ಕಪಿಲಕ್ಷಣಮ್ ॥೪೬॥

ಅಗ್ನಿಯು ಅರ್ಜುನನಿಗೆ ಗಾಂಡೀವ ಧನುಸ್ಸನ್ನು, ಬಾಣಗಳಿಂದ ತುಂಬಿದ್ದ ಅಕ್ಷಯ ಬತ್ತಳಿಕೆಯನ್ನೂ, ಕಪಿಯ ಚಿಹ್ನೆಯನ್ನು ಧರಿಸಿದ್ದ ರಥವನ್ನೂ ಕೊಟ್ಟನು.

**ಮೋಚಯಾಮಾಸ ಬೀಭತ್ಸುರ್ಮಯಂ ತತ್ರ ಮಹಾಸುರಮ್ ।**
**ಸ ಚಕಾರ ಸಭಾಂ ದಿವ್ಯಾಂ ಸರ್ವರತ್ನವಿಭೂಷಿತಾಮ್ ॥೪೭॥**

ಖಾಂಡವದಹನಕಾಲದಲ್ಲಿ ಅರ್ಜುನನು ಮಹಾಸುರನಾದ ಮಯನನ್ನು ಅಗ್ನಿಯಿಂದ ಪಾರುಮಾಡಿದನು. ಮಯನು ಪಾಂಡವರ ಸಲುವಾಗಿ ಸರ್ವರತ್ನಭೂಷಿತವಾದ ದಿವ್ಯಸಭೆಯನ್ನು ನಿರ್ಮಾಣ ಮಾಡಿದನು.

**ತಸ್ಯಾಂ ದುರ್ಯೋಧನಃ ಕ್ಷುದ್ರೋ ಲೋಭಂ ಚಕ್ರೇ ಸುದುರ್ಮತಿಃ ।**
**ತತೋಽಕ್ಷೈರ್ವಂಚಯಿತ್ವಾ ಚ ಸೌಬಲೇನ ಯುಧಿಷ್ಠಿರಮ್ ॥೪೮॥**

**ವನಂ ಪ್ರಸ್ಥಾಪಯಾಮಾಸ ಸಪ್ತವರ್ಷಾಣಿ ಪಂಚ ಚ ।**
**ಅಜ್ಞಾತಮೇಕಂ ರಾಷ್ಟ್ರೇ ತು ತತೋ ವರ್ಷಂ ತ್ರಯೋದಶಮ್ ॥೪೯॥**

ನೀಚನೂ, ದುರ್ಬುದ್ಧಿಯೂ ಆದ ದುರ್ಯೋಧನನು ಆ ಸಭೆಯಲ್ಲಿ ದುರಾಸೆಯನ್ನು ಮಾಡಿದನು. ಅನಂತರ ಪಗಡೆಯ ಆಟದಲ್ಲಿ ಶಕುನಿಯಿಂದ ಧರ್ಮರಾಜನನ್ನು ವಂಚಿಸಿ ಹನ್ನೆರಡು ವರ್ಷ ವನವಾಸ ಮತ್ತು ಅನಂತರದ ಒಂದು ವರ್ಷ ಅಜ್ಞಾತವಾಸಕ್ಕಾಗಿ ಧರ್ಮರಾಜನನ್ನು ಕಳುಹಿಸಿದನು.

**ಗತೇ ತ್ರಯೋದಶೇ ವರ್ಷೇ ಯಾಚಮಾನಾಃ ಸ್ವಕಂ ವಸು ।**
**ನಾಲಭಂತ ಮಹಾರಾಜ ತತೋ ಯುದ್ಧಮವರ್ತತ ॥೫೦॥**

ಹದಿಮೂರು ವರ್ಷಗಳು ಕಳೆದಮೇಲೆ ತಮ್ಮ ಸಂಪತ್ತನ್ನು ಬೇಡಿದರೂ ಸಹ ಪಾಂಡವರು ಅದನ್ನು ಪಡೆಯಲಿಲ್ಲ. ಆ ಕಾರಣದಿಂದ ಯುದ್ಧವು ಜರುಗಿತು.

**ತತಸ್ತೇ ಸರ್ವಮುತ್ಸಾದ್ಯ ಹತ್ವಾ ದುರ್ಯೋಧನಂ ರಣೇ ।**
**ರಾಜ್ಯಂ ತದಂತೇ ಭೂಯಿಷ್ಠಂ ಪ್ರತ್ಯಪದ್ಯಂತ ಪಾಂಡವಾಃ ॥೫೧॥**

ಆಗ ಪಾಂಡವರು ಯುದ್ಧದಲ್ಲಿ ಎಲ್ಲರನ್ನೂ ಸಂಹರಿಸಿ, ದುರ್ಯೋಧನನನ್ನು ಕೊಂದು ತಮ್ಮ ಶ್ರೇಷ್ಠವಾದ ರಾಜ್ಯವನ್ನು ಮರಳಿ ಪಡೆದರು.

ಇಷ್ಟ್ವಾ ಕ್ರತೂಂಶ್ಚ ವಿವಿಧಾನಶ್ವಮೇಧಾದಿಕಾನ್ ಬಹೂನ್ ।
ಧೃತರಾಷ್ಟ್ರೇ ಗತೇ ಸ್ವರ್ಗಂ ವಿದುರೇ ಪಂಚತಾಂ ಗತೇ ॥೫೨॥

ಗಮಯಿತ್ವಾ ಸ್ತ್ರಿಯಃ ಸ್ವರ್ಗಂ ರಾಜ್ಞಾಮಮಿತತೇಜಸಾಮ್ ।
ವಾರ್ಷ್ಣೇಯೇ ನಿಲಯಂ ಪ್ರಾಪ್ತೇ ವಿಷ್ಣುದಾರಾನ್ ಪ್ರರಕ್ಷ್ಯ ಚ ।
ಮಹಾಪ್ರಸ್ಥಾನಿಕಾನ್ ಕೃತ್ವಾ ಗತಾಃ ಸ್ವರ್ಗಮನುತ್ತಮಮ್ ॥೫೩॥

ಅನಂತರ ಪಾಂಡವರು ಅಶ್ವಮೇಧಾದಿ ಅನೇಕ ಯಾಗಗಳನ್ನು ಮಾಡಿ ಧೃತರಾಷ್ಟ್ರನೂ, ವಿದುರನೂ ಸ್ವರ್ಗಸ್ಥರಾದ ಮೇಲೆ, ಅಮಿತಪರಾಕ್ರಮಿಗಳಾದ ಎಲ್ಲಾ ರಾಜರ ಪತ್ನಿಯರನ್ನೂ ಸ್ವರ್ಗಕ್ಕೆ ಕಳುಹಿಸಿ ಕೃಷ್ಣನೂ ಪರಂಧಾಮವನ್ನು ಸೇರಿದಮೇಲೆ, ಕೃಷ್ಣಪತ್ನಿಯರನ್ನು ರಕ್ಷಿಸಿ, ಮಹಾಪ್ರಸ್ಥಾನವನ್ನು ಮಾಡಿ ಶ್ರೇಷ್ಠವಾದ ಸ್ವರ್ಗವನ್ನು ಪಡೆದರು. ಅಂತ್ಯಕಾಲದಲ್ಲಿ ಭಗವತ್ ಪ್ರದಕ್ಷಿಣೆ, ಭಗವದರ್ಚನೆಗಳನ್ನು ನಡೆಸಿ ದೇಹವನ್ನು ಬೇರ್ಪಡಿಸುವುದು ಮಹಾಪ್ರಸ್ಥಾನವೆನಿಸಿದೆ.

ಏವಮೇತತ್ ಪುರಾವೃತ್ತಂ ತೇಷಾಮಕ್ಲಿಷ್ಟಕರ್ಮಣಾಮ್ ।
ಭೇದೋ ರಾಜ್ಯವಿನಾಶಶ್ಚ ಜಯಶ್ಚ ಜಯತಾಂವರ ॥೫೪॥

ಎಲೈ ವಿಜಯಿಗಳಲ್ಲಿ ಶ್ರೇಷ್ಠನೇ, ಅಕ್ಲಿಷ್ಟಕಾರಿಗಳಾದ ಪಾಂಡವರಿಗೆ ದುರ್ಯೋಧನಾದಿಗಳೊಟ್ಟಿಗೆ ವಿರೋಧವು, ಕೆಟ್ಟದಾದ ದ್ಯೂತವನ್ನು ಆಚರಿಸಿದ ಕಾರಣ ರಾಜ್ಯನಾಶವೂ ಪುನಃ ಕೊನೆಯಲ್ಲಿ ಜಯವೂ ಈ ರೀತಿಯಲ್ಲಿ ಹಿಂದೆ ನಡೆಯಿತು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಚತುಃಪಂಚಾಶೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ದ್ವಿತೀಯೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಐವತ್ನಾಲ್ಕನೆಯ ಅಧ್ಯಾಯ ಮುಗಿಯಿತು.

★★★★★

# ಐವತ್ತೈದನೆಯ ಅಧ್ಯಾಯ

(ಭಾರತಪ್ರಶಂಸೆ ಮತ್ತು ಭಾರತಶ್ರವಣದ ಫಲನಿರೂಪಣೆ)

ಜನಮೇಜಯಃ

ಕಥಿತಂ ವೈ ಸಮಾಸೇನ ತ್ವಯಾ ಸರ್ವಂ ದ್ವಿಜೋತ್ತಮ ।
ಮಹಾಭಾರತಮಾಖ್ಯಾನಂ ಕುರೂಣಾಂ ಚರಿತಂ ಮಹತ್ ॥೧॥

ಎಲೈ ದ್ವಿಜೋತ್ತಮರಾದ ವೈಶಂಪಾಯನರೇ, ಕುರುಗಳ ಮಹಾಚರಿತ್ರೆಯಾದ ಮಹಾಭಾರತದ ಆಖ್ಯಾನವು ಸಂಕ್ಷೇಪವಾಗಿ ಹೇಳಲ್ಪಟ್ಟಿತು.

ಕಥಾಂ ತೇಷಾಂ ವಿಚಿತ್ರಾರ್ಥಾಮಿಮಾಂ ಕಥಯತಿ ತ್ವಯಿ ।
ವಿಸ್ತರಶ್ರವಣೇ ಜಾತಂ ಕೌತೂಹಲಮತೀವ ಮೇ ॥೨॥

ವಿಚಿತ್ರಾರ್ಥಗಳಿಂದ ಕೂಡಿರುವ ಈ ಕಥೆಯನ್ನು ನೀವು ಹೇಳುತ್ತಿರುವಂತೆಯೇ ಇದನ್ನು ವಿಸ್ತಾರವಾಗಿ ಕೇಳಬೇಕೆಂಬ ಕುತೂಹಲವು ನನಗೆ ಉಂಟಾಗಿದೆ.

ಸ ಭವಾನ್ ವಿಸ್ತರೇಣೇಮಾಂ ಪುನರಾಖ್ಯಾತುಮರ್ಹತಿ ।
ನ ಹಿ ತೃಪ್ಯಾಮಿ ಪೂರ್ವೇಷಾಂ ಶೃಣ್ವಾನಶ್ಚರಿತಂ ಮಹತ್ ॥೩॥

ತಾವು ಇದೇ ಕಥೆಯನ್ನು ಮತ್ತೆ ವಿಸ್ತಾರವಾಗಿ ಹೇಳಬೇಕು. ನಮ್ಮ ಪೂರ್ವಜರ ಮಹಾಚರಿತ್ರೆಯನ್ನು ಕೇಳುತ್ತಿರುವ ನನಗೆ ತೃಪ್ತಿಯೇ ಉಂಟಾಗುತ್ತಿಲ್ಲ.

ನ ತತ್ಕಾರಣಮಲ್ಪಂ ಹಿ ಧರ್ಮಜ್ಞಾ ಯತ್ರ ಪಾಂಡವಾಃ ।
ಅವಧ್ಯಾನ್ ಸರ್ವತೋ ಜಘ್ನುಃ ಪ್ರಶಸ್ಯಂತಶ್ಚ ಮಾನವೈಃ ॥೪॥

ಧರ್ಮವನ್ನು ತಿಳಿದವರೂ, ಎಲ್ಲ ಮನುಷ್ಯರಿಂದಲೂ ಸ್ತುತ್ಯರಾದವರೂ ಆದ ಪಾಂಡವರು ಅವಧ್ಯರಾದ ಗುರುಹಿರಿಯರನ್ನು ಸಂಹಾರಮಾಡಲು ಅಲ್ಪವಾದ ಕಾರಣವು ಇರಲಾರದು.

ಕಿಮರ್ಥಂ ತೇ ಮಹಾವೀರ್ಯಾಃ ಶಾಂತಾಃ ಸಂತೋಽಪ್ಯನಾಗಸಃ ।
ಪ್ರಯುಜ್ಯಮಾನಾನ್ ಸಂಕ್ಲೇಶಾನ್ ಕ್ಷಾಂತವಂತೋ ದುರಾತ್ಮಭಿಃ ॥೫॥

ಮಹಾಪರಾಕ್ರಮಶಾಲಿಗಳೂ, ಶಾಂತರೂ, ನಿರಪರಾಧಿಗಳೂ ಮತ್ತು ಸಜ್ಜನರೂ ಆದ ಅವರು ದುರಾತ್ಮರು ಕೊಟ್ಟ ಅನೇಕ ಪೀಡೆಗಳನ್ನು ಯಾವ ಕಾರಣದಿಂದ ಸಹಿಸಿದರು?

ಕಥಂ ನಾಗಾಯುತಬಲೋ ಬಾಹುಶಾ(ಷಾ)ಲೀ ವೃಕೋದರಃ ।
ಪರಿಕ್ಲಿಶ್ಯನ್ನಪಿ ಕ್ರೋಧಂ ಧೃತವಾನ್ ವೈ ಪರಂತಪಃ ॥೬॥

ಹತ್ತುಸಾವಿರ ಆನೆಯ ಬಲವುಳ್ಳವನೂ, ಶ್ರೇಷ್ಠಬಾಹುಬಲವುಳ್ಳವನೂ , ಶತ್ರುಸಂಹಾರಕನೂ ಆದ ಭೀಮನು ಪೀಡೆಗೆ ಒಳಗಾದರೂ ಸಹ ಹೇಗೆ ಕ್ರೋಧವನ್ನು ತಡೆದುಕೊಂಡನು?

ಕಥಂ ಸಾ ದ್ರೌಪದೀ ಕೃಷ್ಣಾ ಕ್ಲಿಶ್ಯಮಾನಾ ದುರಾತ್ಮಭಿಃ ।
ಶಕ್ತಾ ಸತೀ ಧಾರ್ತರಾಷ್ಟ್ರಾನ್ ನಾದಹದ್ ಘೋರಚಕ್ಷುಷಾ ॥೭॥

ದುರಾತ್ಮರಿಂದ ಪೀಡೆಗೊಳಗಾದ ಆ ದ್ರೌಪದಿಯು ಪೀಡೆಗೊಳಗಾದಾಗ ಆ ದುರ್ಯೋಧನಾದಿಗಳನ್ನು, ಸಮರ್ಥಳಾಗಿದ್ದರೂ ಸಹ ಏಕೆ ತನ್ನ ಘೋರ ದೃಷ್ಟಿಯಿಂದ ದಹಿಸಲಿಲ್ಲ?

ಕಥಂ ವ್ಯಸನಿನಂ ದ್ಯೂತೇ ಪಾರ್ಥೌ ಮಾದ್ರೀಸುತೌ ತದಾ ।
ಅನ್ವವ್ರಜಂತ ರಾಜಾನಂ ವಂಚ್ಯಮಾನಾ ದುರಾತ್ಮಭಿಃ ॥೮॥

ದುರಾತ್ಮರಿಂದ ವಂಚಿತರಾದ ಭೀಮಾರ್ಜುನರೂ ಮತ್ತು ಮಾದ್ರಿಯ ಮಕ್ಕಳಾದ ನಕುಲ ಸಹದೇವರೂ ದ್ಯೂತದ ಚಟವುಳ್ಳ ಧರ್ಮರಾಜನನ್ನು ಹೇಗೆ ಹಿಂಬಾಲಿಸಿದರು?

ಕಥಂ ಧರ್ಮಭೃತಾಂ ಶ್ರೇಷ್ಠಃ ಸುತೋ ಧರ್ಮಸ್ಯ ಧರ್ಮವಿತ್ ।
ಅನರ್ಹಃ ಪರಮಂ ಕ್ಲೇಶಂ ಸೋಢವಾನ್ ಸ ಯುಧಿಷ್ಠಿರಃ ॥೯॥

ಯಮಧರ್ಮನ ಮಗನಾದ, ಕ್ಲೇಶಗಳನ್ನು ಅನುಭವಿಸಲು ಅನರ್ಹನಾದ, ಧರ್ಮವೇತ್ತವಾದ ಯುಧಿಷ್ಠಿರನು ಹೇಗೆ (ಇಂತಹ) ಪರಮ ಕ್ಲೇಶಗಳನ್ನು ಸಹಿಸಿದನು?

ಕಥಂ ಚ ಬಹುಲಾಂ ಸೇನಾಂ ಪಾಂಡವಃ ಕೃಷ್ಣಸಾರಥಿಃ ।
ಅಸ್ತ್ರೈನೈಕೋऽನಯತ್ ಸರ್ವಾಂ ಪಿತೃಲೋಕಂ ಧನಂಜಯಃ ॥೧೦॥

ಕೃಷ್ಣಸಾರಥಿಯಾಗಿದ್ದ, ಪಾಂಡುವಿನ ಮಗನಾದ ಧನಂಜಯನು ಹೇಗೆ ಒಬ್ಬನೇ ಬಾಣಪ್ರಯೋಗವನ್ನು ಮಾಡಿ ದೊಡ್ಡ ಸೇನೆಯನ್ನು ಗೆದ್ದು ಎಲ್ಲರನ್ನೂ ಪಿತೃಲೋಕಕ್ಕೆ ಕಳುಹಿಸಿದನು?

ಏತದಾಚಕ್ಷ್ವ ಮೇ ಸರ್ವಂ ಯಥಾವೃತ್ತಂ ತಪೋಧನ ।
ಯದ್ಯಚ್ಚ ಕೃತವಂತಸ್ತೇ ತತ್ರತತ್ರ ಮಹಾರಥಾಃ ॥೧೧॥

ಎಲೈ ತಪೋಧನರೇ, ಇವೆಲ್ಲವನ್ನೂ ಮತ್ತು ಆ ಮಹಾತ್ಮರು ಎಲ್ಲೆಲ್ಲಿ ಏನು ಮಾಡಿದರೆಂಬ ಎಲ್ಲಾ ವಿಷಯಗಳನ್ನೂ ಹೇಗೆ ಹೇಗೆ ನಡೆಯಿತೋ ಹಾಗೆಯೇ ನನಗೆ ಎಲ್ಲವನ್ನೂ ತಿಳಿಸಿ.

ವೈಶಂಪಾಯನಃ

ಮಹರ್ಷೇಃ ಸರ್ವಲೋಕಸ್ಯ ಪೂಜಿತಸ್ಯ ಮಹಾತ್ಮನಃ ।
ಪ್ರವಕ್ಷ್ಯಾಮಿ ಮತಂ ಕೃತ್ಸ್ನಂ ವ್ಯಾಸಸ್ಯಾಮಿತತೇಜಸಃ ॥೧೨॥

ಸರ್ವಲೋಕಪೂಜಿತರಾದ ಮಹಾತ್ಮರಾದ ವ್ಯಾಸಮಹರ್ಷಿಗಳ ಅಭಿಪ್ರಾಯದಂತೆಯೇ ಎಲ್ಲವನ್ನೂ ಸಮಗ್ರವಾಗಿ ತಿಳಿಸುತ್ತೇನೆ.

ಇದಂ ಶತಸಹಸ್ರಂ ಹಿ ಶ್ಲೋಕಾನಾಂ ಪುಣ್ಯಕರ್ಮಣಾಮ್ ।
ಉಪಾಖ್ಯಾನೈಃ ಸಹ ಜ್ಞೇಯಂ ಶ್ರಾವ್ಯಂ ಭಾರತಮುತ್ತಮಮ್ ॥೧೩॥

ಈ ಶ್ರೇಷ್ಠವಾದ ಮಹಾಭಾರತವು ಪುಣ್ಯಕಾರ್ಯವನ್ನು ಮಾಡಿದವರ ಉಪಾಖ್ಯಾನಗಳಿಂದ ಕೂಡಿ ಒಂದು ಲಕ್ಷ ಶ್ಲೋಕಾತ್ಮಕವಾಗಿದ್ದು ಕೇಳಲು ಬಹಳ ಸೊಗಸಾಗಿದೆ ಎಂದು ತಿಳಿಯಬೇಕು.

ಸಂಕ್ಷೇಪೇಣ ತು ವಕ್ಷ್ಯಾಮಿ ಸರ್ವಮೇತನ್ನರಾಧಿಪ ।
ಅಧ್ಯಾಯಾನಾಂ ಸಹಸ್ರೇ ದ್ವೇ ಪರ್ವಣಾಂ ಶತಮೇವ ಚ ॥೧೪॥

ಎಲೈ ರಾಜನೇ, ಇವೆಲ್ಲವನ್ನೂ ನಾನು ನಿನಗೆ ಸಂಕ್ಷೇಪವಾಗಿ ತಿಳಿಸುತ್ತೇನೆ. ಇದರಲ್ಲಿ ಎರಡು ಸಹಸ್ರ ಅಧ್ಯಾಯಗಳೂ, ಒಂದುನೂರು ಅವಾಂತರ ಪರ್ವಗಳೂ ಇವೆ.

ಕಿಮರ್ಥಂ ತೇ ಮಹಾವೀರ್ಯಾಃ ಶಾಂತಾಃ ಸಂತೋಽಪ್ಯನಾಗಸಃ ।
ಪ್ರಯುಜ್ಯಮಾನಾನ್ ಸಂಕ್ಲೇಶಾನ್ ಕ್ಷಾಂತವಂತೋ ದುರಾತ್ಮಭಿಃ ॥೫॥

ಮಹಾಪರಾಕ್ರಮಶಾಲಿಗಳೂ, ಶಾಂತರೂ, ನಿರಪರಾಧಿಗಳೂ ಮತ್ತು ಸಜ್ಜನರೂ ಆದ ಅವರು ದುರಾತ್ಮರು ಕೊಟ್ಟ ಅನೇಕ ಪೀಡೆಗಳನ್ನು ಯಾವ ಕಾರಣದಿಂದ ಸಹಿಸಿದರು?

ಕಥಂ ನಾಗಾಯುತಬಲೋ ಬಾಹುಶಾ(ಷಾ)ಲೀ ವೃಕೋದರಃ ।
ಪರಿಕ್ಲಿಶ್ಯನ್ನಪಿ ಕ್ರೋಧಂ ಧೃತವಾನ್ ವೈ ಪರಂತಪಃ ॥೬॥

ಹತ್ತುಸಾವಿರ ಆನೆಯ ಬಲವುಳ್ಳವನೂ, ಶ್ರೇಷ್ಠಬಾಹುಬಲವುಳ್ಳವನೂ , ಶತ್ರುಸಂಹಾರಕನೂ ಆದ ಭೀಮನು ಪೀಡೆಗೆ ಒಳಗಾದರೂ ಸಹ ಹೇಗೆ ಕ್ರೋಧವನ್ನು ತಡೆದುಕೊಂಡನು?

ಕಥಂ ಸಾ ದ್ರೌಪದೀ ಕೃಷ್ಣಾ ಕ್ಲಿಶ್ಯಮಾನಾ ದುರಾತ್ಮಭಿಃ ।
ಶಕ್ತಾ ಸತೀ ಧಾರ್ತರಾಷ್ಟ್ರಾನ್ ನಾದಹದ್ ಘೋರಚಕ್ಷುಷಾ ॥೭॥

ದುರಾತ್ಮರಿಂದ ಪೀಡೆಗೊಳಗಾದ ಆ ದ್ರೌಪದಿಯು ಪೀಡೆಗೊಳಗಾದಾಗ ಆ ದುರ್ಯೋಧನಾದಿಗಳನ್ನು ಸಮರ್ಥಳಾಗಿದ್ದರೂ ಸಹ ಏಕೆ ತನ್ನ ಘೋರ ದೃಷ್ಟಿಯಿಂದ ದಹಿಸಲಿಲ್ಲ?

ಕಥಂ ವ್ಯಸನಿನಂ ದ್ಯೂತೇ ಪಾರ್ಥೌ ಮಾದ್ರೀಸುತೌ ತದಾ ।
ಅನ್ವವ್ರಜಂತ ರಾಜಾನಂ ವಂಚ್ಯಮಾನಾ ದುರಾತ್ಮಭಿಃ ॥೮॥

ದುರಾತ್ಮರಿಂದ ವಂಚಿತರಾದ ಭೀಮಾರ್ಜುನರೂ ಮತ್ತು ಮಾದ್ರಿಯ ಮಕ್ಕಳಾದ ನಕುಲ ಸಹದೇವರೂ ದ್ಯೂತದ ಚಟವುಳ್ಳ ಧರ್ಮರಾಜನನ್ನು ಹೇಗೆ ಹಿಂಬಾಲಿಸಿದರು?

ಕಥಂ ಧರ್ಮಭೃತಾಂ ಶ್ರೇಷ್ಠಃ ಸುತೋ ಧರ್ಮಸ್ಯ ಧರ್ಮವಿತ್ ।
ಅನರ್ಹಃ ಪರಮಂ ಕ್ಲೇಶಂ ಸೋಢವಾನ್ ಸ ಯುಧಿಷ್ಠಿರಃ ॥೯॥

ಯಮಧರ್ಮನ ಮಗನಾದ, ಕ್ಲೇಶಗಳನ್ನು ಅನುಭವಿಸಲು ಅನರ್ಹನಾದ, ಧರ್ಮವೇತ್ತನಾದ ಯುಧಿಷ್ಠಿರನು ಹೇಗೆ (ಇಂತಹ) ಪರಮ ಕ್ಲೇಶಗಳನ್ನು ಸಹಿಸಿದನು?

ಕಥಂ ಚ ಬಹುಲಾಂ ಸೇನಾಂ ಪಾಂಡವಃ ಕೃಷ್ಣಸಾರಥಿಃ ।
ಅಸ್ಯನ್ನೇಕೋಽನಯತ್ ಸರ್ವಾಂ ಪಿತೃಲೋಕಂ ಧನಂಜಯಃ ॥೧೦॥

ಕೃಷ್ಣಸಾರಥಿಯಾಗಿದ್ದ ಪಾಂಡುವಿನ ಮಗನಾದ ಧನಂಜಯನು ಹೇಗೆ ಒಬ್ಬನೇ ಬಾಣಪ್ರಯೋಗವನ್ನು ಮಾಡಿ ದೊಡ್ಡ ಸೇನೆಯನ್ನು ಗೆದ್ದು ಎಲ್ಲರನ್ನೂ ಪಿತೃಲೋಕಕ್ಕೆ ಕಳುಹಿಸಿದನು?

ಏತದಾಚಕ್ಷ್ವ ಮೇ ಸರ್ವಂ ಯಥಾವೃತ್ತಂ ತಪೋಧನ ।
ಯದ್ಯಚ್ಚ ಕೃತವಂತಸ್ತೇ ತತ್ರತತ್ರ ಮಹಾರಥಾಃ ॥೧೧॥

ಎಲೈ ತಪೋಧನರೇ, ಇವೆಲ್ಲವನ್ನೂ ಮತ್ತು ಆ ಮಹಾತ್ಮರು ಎಲ್ಲೆಲ್ಲಿ ಏನು ಮಾಡಿದರೆಂಬ ಎಲ್ಲಾ ವಿಷಯಗಳನ್ನೂ ಹೇಗೆ ಹೇಗೆ ನಡೆಯಿತೋ ಹಾಗೆಯೇ ನನಗೆ ಎಲ್ಲವನ್ನೂ ತಿಳಿಸಿ.

ವೈಶಂಪಾಯನಃ

ಮಹರ್ಷೇಃ ಸರ್ವಲೋಕಸ್ಯ ಪೂಜಿತಸ್ಯ ಮಹಾತ್ಮನಃ ।
ಪ್ರವಕ್ಷ್ಯಾಮಿ ಮತಂ ಕೃತ್ಸ್ನಂ ವ್ಯಾಸಸ್ಯಾಮಿತತೇಜಸಃ ॥೧೨॥

ಸರ್ವಲೋಕಪೂಜಿತರಾದ ಮಹಾತ್ಮರಾದ ವ್ಯಾಸಮಹರ್ಷಿಗಳ ಅಭಿಪ್ರಾಯದಂತೆಯೇ ಎಲ್ಲವನ್ನೂ ಸಮಗ್ರವಾಗಿ ತಿಳಿಸುತ್ತೇನೆ.

ಇದಂ ಶತಸಹಸ್ರಂ ಹಿ ಶ್ಲೋಕಾನಾಂ ಪುಣ್ಯಕರ್ಮಣಾಮ್ ।
ಉಪಾಖ್ಯಾನೈಃ ಸಹ ಜ್ಞೇಯಂ ಶ್ರಾವ್ಯಂ ಭಾರತಮುತ್ತಮಮ್ ॥೧೩॥

ಈ ಶ್ರೇಷ್ಠವಾದ ಮಹಾಭಾರತವು ಪುಣ್ಯಕಾರ್ಯವನ್ನು ಮಾಡಿದವರ ಉಪಾಖ್ಯಾನಗಳಿಂದ ಕೂಡಿ ಒಂದು ಲಕ್ಷ ಶ್ಲೋಕಾತ್ಮಕವಾಗಿದ್ದು ಕೇಳಲು ಬಹಳ ಸೊಗಸಾಗಿದೆ ಎಂದು ತಿಳಿಯಬೇಕು.

ಸಂಕ್ಷೇಪೇಣ ತು ವಕ್ಷ್ಯಾಮಿ ಸರ್ವಮೇತನ್ನರಾಧಿಪ ।
ಅಧ್ಯಾಯಾನಾಂ ಸಹಸ್ರೇ ದ್ವೇ ಪರ್ವಣಾಂ ಶತಮೇವ ಚ ॥೧೪॥

ಎಲೈ ರಾಜನೇ, ಇವೆಲ್ಲವನ್ನೂ ನಾನು ನಿನಗೆ ಸಂಕ್ಷೇಪವಾಗಿ ತಿಳಿಸುತ್ತೇನೆ. ಇದರಲ್ಲಿ ಎರಡು ಸಹಸ್ರ ಅಧ್ಯಾಯಗಳೂ, ಒಂದುನೂರು ಅವಾಂತರ ಪರ್ವಗಳೂ ಇವೆ.

ಶ್ಲೋಕಾನಾಂ ತು ಸಹಸ್ರಾಣಿ ನವತಿಶ್ಚ ದಶೈವ ತು ।
ತತೋಽಷ್ಟಾದಶಭಿಃ ಪರ್ವೈಃ ಸಂಗೃಹೀತಂ ಮಹಾತ್ಮನಾ ॥೧೫॥

ತೊಂಭತ್ತುಸಾವಿರ ಮತ್ತು ಹತ್ತುಸಾವಿರ ಶ್ಲೋಕಗಳನ್ನೊಳಗೊಂಡ ಇದರಲ್ಲಿ ಮಹಾತ್ಮರಾದ ವ್ಯಾಸರು ಹದಿನೆಂಟು ಪರ್ವಗಳಲ್ಲಿ ಎಲ್ಲವನ್ನೂ ಸಂಗ್ರಹಿಸಿದ್ದಾರೆ.

ಯ ಇದಂ ಶ್ರಾವಯೇದ್ ವಿದ್ವಾನ್ ಯಶ್ಚೇದಂ ಶೃಣುಯಾನ್ನರಃ ।
ಸ ಪ್ರಾಪ್ಯ ಬ್ರಹ್ಮಣಃ ಸ್ಥಾನಂ ದೇವೈರ್ಯಾತಿ ಚ ತುಲ್ಯತಾಮ್ ॥೧೬॥

ಯಾರು ಈ ಭಾರತವನ್ನು ಪಾರಾಯಣ ಮಾಡುತ್ತಾರೋ ಮತ್ತು ಯಾರು ಕೇಳುತ್ತಾರೋ ಅವರು ಬ್ರಹ್ಮದೇವರ ಲೋಕವನ್ನು ಹೊಂದಿ ದೇವತೆಗಳಿಗೆ ಸಮಾನರಾಗುತ್ತಾರೆ

ಇದಂ ಹಿ ವೇದೈಃ ಸಮಿತಂ ಪವಿತ್ರಂ ಚೋತ್ತಮಂ ಮಹತ್ ।
ಶ್ರಾವ್ಯಾಣಾಮುತ್ತಮಂ ಶ್ರಾವ್ಯಂ ಪುರಾಣಮೃಷಿಸಂಸ್ಕೃತಮ್ ॥೧೭॥

ಶ್ರೇಷ್ಠವಾದ ಮತ್ತು ಪವಿತ್ರವಾದ ಈ ಭಾರತವು ಶ್ರವಣಮಾಡಬೇಕಾದುದರಲ್ಲಿ ಅತ್ಯಂತ ಶ್ರೇಷ್ಠವಾದುದು. ಇದು ಮಹರ್ಷಿಗಳಾದ ವ್ಯಾಸರಿಂದ ಪ್ರಣೀತವಾದ, ಕೇಳಲೇಬೇಕಾದ ಪುರಾಣ.

ಅಸ್ಮಿನ್ನರ್ಥಶ್ಚ ಧರ್ಮಶ್ಚ ನಿಖಿಲೇನೋಪದಿಶ್ಯತೇ ।
ಇತಿಹಾಸೇ ಮಹಾಪುಣ್ಯೇ ಬುದ್ಧಿಶ್ಚ ಪರಮಾರ್ಪಿತಾ ॥೧೮॥

ಈ ಮಹಾಪುಣ್ಯಪ್ರದವಾದ ಇತಿಹಾಸದಲ್ಲಿ ಅರ್ಥವೂ, ಧರ್ಮವೂ ಮತ್ತು ಭಗವದರ್ಪಿತವಾದ ಬುದ್ಧಿಯೂ ಸಮಗ್ರವಾಗಿ ನಿರೂಪಿತವಾಗಿದೆ.

ಅಕ್ಷುದ್ರಾನ್ ದಾನಶೀಲಾಂಶ್ಚ ಸತ್ಯಶೀಲಾನನಾಸ್ತಿಕಾನ್ ।
ಕಾರ್ಷ್ಣಂ ವೇದಮಿಮಂ ವಿದ್ವಾನ್ ಶ್ರಾವಯಿತ್ವಾರ್ಥಮಶ್ನುತೇ ॥೧೯॥

ವೇದವ್ಯಾಸರಿಂದ ರಚಿತವಾದ ವೇದವೆಂದೇ ಪ್ರಸಿದ್ಧವಾದ ಈ ಭಾರತವನ್ನು ಕ್ಷುದ್ರತನವಿಲ್ಲದ, ದಾನಶೀಲರಾದ, ಸತ್ಯಶೀಲರಾದ ಮತ್ತು ಆಸ್ತಿಕರಾದ ಜನರಿಗೆ ಶ್ರವಣಮಾಡಿಸಿದ ವಿದ್ವಾಂಸನು ಎಲ್ಲಾ ಪುರುಷಾರ್ಥಗಳನ್ನೂ ಪಡೆಯುತ್ತಾನೆ.

**ಭ್ರೂಣಹತ್ಯಾಕೃತಂ ಪಾಪಂ ತಥಾ ಜಹ್ಯಾನ್ನ ಸಂಶಯಃ ।**
**ಇತಿಹಾಸಮಿಮಂ ಶ್ರುತ್ವಾ ಪುರುಷೋಽಪಿ ಸುದಾರುಣಃ ॥೨೦॥**

ಅತ್ಯುಗ್ರವಾದ ಪುರುಷನೂ ಸಹ ಈ ಭಾರತವನ್ನು ಶ್ರವಣಮಾಡಿದರೆ ಭ್ರೂಣಹತ್ಯೆಯನ್ನು ಮಾಡಿದ ಪಾಪದಿಂದಲೂ ಸಹ ನಿಸ್ಸಂಶಯವಾಗಿ ನಿರ್ಮುಕ್ತನಾಗುತ್ತಾನೆ.

**ಜಯೋ ನಾಮೇತಿಹಾಸೋಽಯಂ ಶ್ರೋತವ್ಯೋ ವಿಜಿಗೀಷುಣಾ ।**
**ಮಹೀಂ ವಿಜಯತೇ ಕೃತ್ಸ್ನಾಂ ಶತ್ರೂಂಶ್ಚಾಪ್ಯಧಿ ತಿಷ್ಠತಿ ॥೨೧॥**

ಯುದ್ಧದಲ್ಲಿ ಜಯವನ್ನು ಬಯಸುವ ರಾಜನು ಜಯ ಎಂಬ ಹೆಸರಿನ ಈ ಇತಿಹಾಸವನ್ನು ಶ್ರವಣ ಮಾಡಿದರೆ ಸಮಗ್ರವಾದ ಭೂಮಿಯನ್ನು ಗೆಲ್ಲುತ್ತಾನೆ ಮತ್ತು ಶತ್ರುಗಳನ್ನು ಮೆಟ್ಟಿ ನಿಲ್ಲುತ್ತಾನೆ.

**ಇದಂ ಪುಂಸವನಂ ಚೈವ ಇದಂ ಸ್ವಸ್ತ್ಯಯನಂ ಮಹತ್ ।**
**ಮಹರ್ಷಿಯುವರಾಜಾಭ್ಯಾಂ ಶ್ರೋತವ್ಯಂ ಸ್ಯಾತ್ ಪುನಃಪುನಃ ॥೨೨॥**

ಇದರ ಶ್ರವಣವು ಪುಂ (ಗಂಡು) ಸಂತಾನವನ್ನು ತಂದುಕೊಡುತ್ತದೆ ಮತ್ತು ಪರಮ ಮಂಗಳಪ್ರದವಾಗಿದೆ. ಮಹರ್ಷಿಗಳೂ ಮತ್ತು ಯೌವನಸ್ಥರಾಜರೂ ಸಹ ಇದನ್ನು ಮತ್ತೆ ಮತ್ತೆ ಕೇಳಬೇಕು.

**ಅರ್ಥಶಾಸ್ತ್ರಮಿದಂ ಪುಣ್ಯಂ ಧರ್ಮಶಾಸ್ತ್ರಮಿದಂ ಮಹತ್ ।**
**ಮೋಕ್ಷಶಾಸ್ತ್ರಮಿದಂ ಪ್ರೋಕ್ತಂ ವ್ಯಾಸೇನಾಮಿತತೇಜಸಾ ॥೨೩॥**

ವ್ಯಾಸರು ಹೇಳಿದ ಈ ಭಾರತವು ಪುಣ್ಯಕರವಾದ ಅರ್ಥಶಾಸ್ತ್ರ. ಇದು ಮಹತ್ವದಿಂದ ಕೂಡಿದ ಧರ್ಮಶಾಸ್ತ್ರ. ಇದು ಮೋಕ್ಷಶಾಸ್ತ್ರ.

**ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ ।**
**ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್ ॥೨೪॥**

ಎಲೈ ಭರತರ್ಷಭನೇ, ಧರ್ಮ, ಅರ್ಥ, ಕಾಮ, ಮೋಕ್ಷಗಳ ವಿಷಯದಲ್ಲಿ ಇಲ್ಲಿ ಏನು ಹೇಳಲ್ಪಟ್ಟಿದೆಯೋ ಅದೇ ಬೇರೆ ಗ್ರಂಥಗಳಲ್ಲಿ ಹೇಳಲ್ಪಡುತ್ತದೆ. ಇಲ್ಲಿ ಯಾವುದನ್ನು ಹೇಳಿಲ್ಲವೋ ಅದು ಎಲ್ಲಿಯೂ ಇಲ್ಲ (ದೊರೆಯುವುದಿಲ್ಲ).

ಇದಂ ಹಿ ಬ್ರಾಹ್ಮಣೈರ್ಲೋಕೇ ಆಖ್ಯಾತಂ ಬ್ರಾಹ್ಮಣೇಷ್ವಿಹ ।
ಸಂಪ್ರತ್ಯಾಚಕ್ಷತೇ ಚೈವ ಕಥಯಿಷ್ಯಂತಿ ಚಾಪರೇ ॥೨೫॥

ಬ್ರಾಹ್ಮಣರಿಂದ ಬ್ರಾಹ್ಮಣರಿಗೆ ಹೇಳಲ್ಪಟ್ಟ ಈ ಭಾರತವನ್ನು ಈಗಲೂ ಕೆಲವರು ಪ್ರವಚನ ಮಾಡುತ್ತಾರೆ. ಇನ್ನೂ ಕೆಲವರು ಮುಂದೆಯೂ ಕಥೆಯ ರೂಪದಲ್ಲಿ ಹೇಳುತ್ತಾರೆ.

ಪುತ್ರಾಃ ಶುಶ್ರೂಷವಃ ಸಂತಿ ಪ್ರೇಷ್ಯಾಶ್ಚ ಪ್ರಿಯವಾದಿನಃ ।
ಭಾರತಾನಾಂ ಮಹಜ್ಜನ್ಮ ಶೃಣ್ವತೋ ಹ್ಯನಸೂಯಯಾ ॥೨೬॥

ಭರತಕುಲದಲ್ಲಿ ಹುಟ್ಟಿದವರ ಶ್ರೇಷ್ಠವಾದ ಜನ್ಮವನ್ನು ಅಸೂಯೆ ಇಲ್ಲದೆ ಕೇಳುವವರಿಗೆ ಹೇಳಿದ ಮಾತನ್ನು ಕೇಳುವ ಮತ್ತು ಸೇವೆ ಮಾಡುವ ಗಂಡುಮಕ್ಕಳೂ, ಪ್ರಿಯವನ್ನೇ ನುಡಿಯುವ ಸೇವಕರೂ ಉಂಟಾಗುತ್ತಾರೆ.

ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಪುಣ್ಯಂ ತಥೈವ ಚ ।
ಶರೀರೇಣ ಕೃತಂ ಪಾಪಂ ವಾಚಾ ಚ ಮನಸೈವ ಚ ।
ಸರ್ವಂ ತ್ಯಜತಿ ಚ ಕ್ಷಿಪ್ರಮೇತತ್ ಶೃಣ್ವನ್ ನರಃ ಸದಾ ॥೨೭॥

ಈ ಭಾರತದ ಶ್ರವಣವು ಧನಪ್ರದವಾದದ್ದು, ಕೀರ್ತಿಪ್ರದವಾದದ್ದು, ದೀರ್ಘಾಯುಷ್ಯಪ್ರದವಾದದ್ದು ಮತ್ತು ಪುಣ್ಯಪ್ರದವಾದದ್ದು. ಇದರ ಶ್ರವಣದಿಂದ ಮನುಷ್ಯರು ಶರೀರ, ವಾಕ್ ಮತ್ತು ಮನಸ್ಸಿನಿಂದ ಮಾಡಿದ ಪಾಪಗಳು ಶೀಘ್ರವಾಗಿ ನಾಶಹೊಂದುತ್ತದೆ.

ಕೃಷ್ಣದ್ವೈಪಾಯನೇನೇದಂ ಕೃತಂ ಧರ್ಮಚಿಕೀರ್ಷುಣಾ ।
ಕೀರ್ತಿಂ ಪ್ರಥಯತಾ ಲೋಕೇ ಪಾಂಡವಾನಾಂ ಯಶಸ್ವಿನಾಮ್ ।
ಅನ್ಯೇಷಾಂ ಕ್ಷತ್ರಿಯಾಣಾಂ ಚ ಭೂರಿದ್ರವಿಣತೇಜಸಾಮ್ ॥೨೮॥

ಧರ್ಮಪ್ರದವಾಗಿರಬೇಕೆಂಬ ಉದ್ದೇಶದಿಂದ ವ್ಯಾಸರು ಯಶಸ್ವಿಗಳಾದ ಪಾಂಡವರ ಕೀರ್ತಿಯನ್ನು ಜಗತ್ತಿನಲ್ಲಿ ಹರಡುವುದಕ್ಕೆ ಮತ್ತು ಬಹಳ ಧನ ಮತ್ತು ಪರಾಕ್ರಮವುಳ್ಳ ಬೇರೆ ಕ್ಷತ್ರಿಯರ ಕೀರ್ತಿಯನ್ನು ಪ್ರಸರಿಸುವುದಕ್ಕೆ ರಚಿಸಿದರು.

ಯೋಽಧೀತೇ ಭಾರತಂ ಪುಣ್ಯಂ ಬ್ರಾಹ್ಮಣೋ ನಿಯತವ್ರತಃ ।
ಚತುರೋ ವಾರ್ಷಿಕಾನ್ ಮಾಸಾನ್ ಸರ್ವಪಾಪೈಃ ಪ್ರಮುಚ್ಯತೇ ॥೨೯॥

ಯಾವ ಬ್ರಾಹ್ಮಣನು ಮಳೆಗಾಲದ ನಾಲ್ಕು ತಿಂಗಳಲ್ಲಿ ನಿಯಮಬದ್ಧನಾಗಿ ಭಾರತವನ್ನು ಅಧ್ಯಯನ ಮಾಡುವನೋ ಅವನು ಸರ್ವಪಾಪಗಳಿಂದಲೂ ಮುಕ್ತನಾಗುವನು.

ವಿಜ್ಞೇಯಃ ಸರ್ವವೇದಾನಾಂ ಪಾರಣೇ ಭಾರತಂ ವದನ್ ।
ದೇವಾ ಬ್ರಹ್ಮರ್ಷಯೋ ಯತ್ರ ಪುಣ್ಯಾ ರಾಜರ್ಷಯಸ್ತಥಾ ॥೩೦॥

ಸರ್ವ ವೇದಗಳನ್ನು ಪಾರಾಯಣ ಮಾಡುವಾಗ ಯಾವನು ಭಾರತವನ್ನು ಪ್ರವಚನ ಮಾಡುತ್ತಾನೆಯೋ ಅವನು ವಿಶಿಷ್ಟ(ಉತ್ತಮ)ನೆಂದು ತಿಳಿಯಬೇಕು. ಇಲ್ಲಿ ಪಾವನರಾದ ದೇವತೆಗಳ, ಬ್ರಹ್ಮರ್ಷಿಗಳ ಮತ್ತು ರಾಜರ್ಷಿಗಳ ಕಥೆಯು ಹೇಳಲ್ಪಟ್ಟಿದೆ.

ದೇವಾ ಬ್ರಹ್ಮರ್ಷಯೋ ಯತ್ರ ಪುಣ್ಯಾ ರಾಜರ್ಷಯಸ್ತಥಾ ।
ಕೀರ್ತ್ಯಂತೇ ಹತಪಾಪ್ಮಾನಃ ಕೀರ್ತ್ಯಂತೇ ಕೇಶವಸ್ತಥಾ ॥೩೦॥

ಭಗವಾಂಶ್ಚಾಪಿ ದೇವೇಶೋ ಯತ್ರ ದೇವೀ ಚ ಕೀರ್ತ್ಯತೇ ।
ಅನೇಕಜನ್ಮನೋ ಯತ್ರ ಕಾರ್ತಿಕೇಯಸ್ಯ ಸಂಭವಃ ॥೩೨॥

ಪಾಪರಹಿತರಾದ ದೇವತೆಗಳು, ರಾಜರ್ಷಿಗಳು ಮತ್ತು ಬ್ರಹ್ಮರ್ಷಿಗಳು ಇಲ್ಲಿ ಕೀರ್ತಿಸಲ್ಪಡುತ್ತಾರೆ. (ಸರ್ವೋತ್ತಮನಾದ) ಭಗವಂತನಾದ ಕೇಶವನೂ, ದೇವಿಯೂ ಇಲ್ಲಿ ಕೀರ್ತಿಸಲ್ಪಡುತ್ತಾರೆ. ಅನೇಕ ಜನ್ಮಗಳುಳ್ಳ ಷಣ್ಮುಖನ ಅವತಾರವನ್ನೂ ಹೇಳಲಾಗಿದೆ. (ಗೌರೀ, ವಹ್ನಿ, ಶರೀರಗಳಲ್ಲಿ ಜನಿಸಿದ್ದರಿಂದ ಅನೇಕ ಜನ್ಮಗಳುಳ್ಳವನು ಕಾರ್ತಿಕೇಯ).

ಬ್ರಹ್ಮಣೋ ಭಾರ್ಗವಾನಾಂ ಚ ಮಾಹಾತ್ಮ್ಯಂ ಯತ್ರ ವರ್ಣ್ಯತೇ ।
ಸರ್ವಶ್ರುತಿಸಮೂಹೋಽಯಂ ಶ್ರೋತವ್ಯೋ ಧರ್ಮಬುದ್ಧಿಭಿಃ ॥೩೩॥

ವೇದಗಳ ಮತ್ತು ಭೃಗುಕುಲದಲ್ಲಿ ಉತ್ಪನ್ನರಾದವರ ಮಹಾತ್ಮೆಯು ಇಲ್ಲಿ ವರ್ಣಿತವಾಗಿದೆ. ಎಲ್ಲಾ ವೇದಗಳ ಸಾರವಾದ ಈ ಭಾರತವನ್ನು ಧರ್ಮಬುದ್ಧಿಯುಳ್ಳವರು ಕೇಳಬೇಕು.

ಯಶ್ಚೇದಂ ಪಠತೇ ವಿದ್ವಾನ್ ಸದಾ ಪರ್ವಸುಪರ್ವಸು ।
ಧೂತಪಾಪ್ಮಾ ಜಿತಸ್ವರ್ಗೋ ಬ್ರಹ್ಮಲೋಕಂ ಸ ಗಚ್ಛತಿ ॥೩೪॥

ಯಾವನು ಇದರ ಅರ್ಥಾನುಸಂಧಾನಪೂರ್ವಕವಾಗಿ ಯಾವಾಗಲೂ ಇದನ್ನು ಎಲ್ಲಾ ಪರ್ವಕಾಲಗಳಲ್ಲಿಯೂ ಓದುತ್ತಾನೆಯೋ ಅವನು ಪಾಪನಿಮುಕ್ತನಾಗಿ ಸ್ವರ್ಗಲೋಕವನ್ನೂ ಅನಂತರ ಬ್ರಹ್ಮಲೋಕವನ್ನೂ ಸೇರುತ್ತಾನೆ.

ಯಶ್ಚ ರಾಜಾ ಶೃಣೋತೀದಮಖಿಲಾಮಶ್ನುತೇ ಮಹೀಮ್ ।
ಪ್ರಸೂತೇ ಗರ್ಭಿಣೀ ಪುತ್ರಂ ಕನ್ಯಾ ಚಾಶು ಪ್ರದೀಯತೇ ।
ವಣಿಜಃ ಸಿದ್ಧಯಾತ್ರಾಃ ಸ್ಯುರ್ವೀರಾ ವಿಜಯಮಾಪ್ನುಯುಃ ॥೩೫॥

ಇದರ ಶ್ರವಣದಿಂದ ರಾಜನು ಸಮಗ್ರವಾದ ಭೂಮಿಜಯವನ್ನು ಹೊಂದುತ್ತಾನೆ. ಗರ್ಭಿಣಿಯು ಗಂಡುಮಗುವನ್ನು ಪಡೆಯುತ್ತಾಳೆ. ಕನ್ಯೆಯರಿಗೆ ಬೇಗ ವಿವಾಹಭಾಗ್ಯವು ಒದಗುತ್ತದೆ. ವರ್ತಕರು ತಮ್ಮ ವ್ಯಾಪಾರಾರ್ಥವಾದ ಯಾತ್ರೆಯಲ್ಲಿ ಯಶಸ್ಸನ್ನು ಗಳಿಸುತ್ತಾರೆ. ವೀರರು ಯುದ್ಧದಲ್ಲಿ ವಿಜಯವನ್ನು ಪಡೆಯುತ್ತಾರೆ.

ಆಸ್ತಿಕಾನ್ ಶ್ರಾವಯೇನ್ನಿತ್ಯಂ ಬ್ರಾಹ್ಮಣಾಂಶ್ಚಾನಸೂಯಕಾನ್ ।
ವೇದವಿದ್ಯಾವ್ರತಸ್ನಾತಾನ್ ಕ್ಷತ್ರಿಯಾನ್ ಜಯಮಾಸ್ಥಿತಾನ್ ।
ಸ್ವಧರ್ಮನಿತ್ಯಾನ್ ವೈಶ್ಯಾಂಶ್ಚ ಶ್ರಾವಯೇತ್ ಕ್ಷತ್ರಸಂಶ್ರಿತಾನ್ ॥೩೬॥

ಆಸ್ತಿಕರಾದ, ಅಸೂಯಾರಹಿತರಾದ, ವೇದವಿದ್ಯಾಸ್ನಾತರಾದ ಬ್ರಾಹ್ಮಣರಿಗೂ, ಜಯವನ್ನು ಬಯಸುವ ಕ್ಷತ್ರಿಯರಿಗೂ, ಸ್ವಧರ್ಮನಿರತರಾದ ಮತ್ತು ಕ್ಷತ್ರಿಯರನ್ನು ಅನುಸರಿಸುವ ವೈಶ್ಯರಿಗೂ ಈ ಕಥೆಯನ್ನು ಹೇಳಬೇಕು.

ಏಷ ಧರ್ಮಃ ಪುರಾ ದೃಷ್ಟಃ ಸರ್ವಧರ್ಮೇಷು ಭಾರತ ।
ಬ್ರಾಹ್ಮಣಾಚ್ಛ್ರವಣಂ ರಾಜನ್ ವಿಶೇಷೇಣ ವಿಧೀಯತೇ ॥೩೭॥

ಎಲ್ಲಾ ಧರ್ಮಶಾಸ್ತ್ರಗಳಲ್ಲಿಯೂ ಇದು ವಿಶೇಷವಾದ ಧರ್ಮವೆಂದು ಮೊದಲಿನಿಂದಲೂ ಹೇಳಲ್ಪಟ್ಟಿದೆ. ಎಲೈ ರಾಜನೇ, ಬ್ರಾಹ್ಮಣನ ಮುಖದಿಂದ ಶ್ರವಣಮಾಡುವುದನ್ನು ಎಲ್ಲಾ ಶಾಸ್ತ್ರಗಳೂ ವಿಶೇಷವಾಗಿ ವಿಧಾನಮಾಡುತ್ತವೆ.

ಭೂಯೋ ಭೂಯಃ ಪಠೇನ್ನಿತ್ಯಂ ಸ ಗಚ್ಛೇತ್ ಪರಮಾಂ ಗತಿಮ್ ।
ಶ್ಲೋಕಂ ವಾಪ್ಯನುಗೃಹ್ಣೀತ ತಥಾऽರ್ಧಶ್ಲೋಕಮೇವ ವಾ ।
ಅಪಿ ಪಾದಂ ಪಠೇನ್ನಿತ್ಯಂ ನ ಚ ನಿರ್ಭಾರತೋ ಭವೇತ್ ॥೩೮॥

ಮತ್ತೆ ಮತ್ತೆ ಭಾರತವನ್ನು ಪಠನ ಮಾಡುವವನು ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ. ಒಂದು ದಿನದಲ್ಲಿ ಭಾರತದ ಒಂದು ಶ್ಲೋಕವನ್ನಾಗಲೀ, ಅರ್ಧಶ್ಲೋಕವನ್ನಾಗಲೀ, ಕಾಲುಭಾಗ ಶ್ಲೋಕವನ್ನಾಗಲೀ ಪಠಿಸಬೇಕು. ಭಾರತವನ್ನು ಪಠಿಸದೆ ದಿನವನ್ನು ಕಳೆಯಬಾರದು.

ಇಹ ನೈಕಾಶ್ರಯಂ ಜನ್ಮ ರಾಜರ್ಷೀಣಾಂ ಮಹಾತ್ಮನಾಮ್ ।
ಇಹ ಮಂತ್ರವರಃ ಪ್ರೋಕ್ತೋ ಧರ್ಮಶ್ಚ ನೈಕದರ್ಶನಃ ॥೩೯॥

ಇಲ್ಲಿ ಮಹಾತ್ಮರಾದ ರಾಜರ್ಷಿಗಳ ಅನೇಕವಿಧವಾದ ಜನ್ಮವನ್ನು ಹೇಳಲಾಗಿದೆ. ಇಲ್ಲಿ ಶ್ರೇಷ್ಠವಾದ ಮಂತ್ರವೂ (ಮಂತ್ರಾಲೋಚನೆಯೂ) ಮತ್ತು ಅನೇಕ ಶಾಸ್ತ್ರಗಳಿಗೆ ಅನುಗುಣವಾದ ಧರ್ಮವೂ ಹೇಳಲ್ಪಟ್ಟಿದೆ.

ಚತುರೋ ವಾರ್ಷಿಕಾನ್ಮಾಸಾನ್ ಸರ್ವಪಾಪೈಃ ಪ್ರಮುಚ್ಯತೇ ।
ವಿಜ್ಞೇಯಃ ಸರ್ವವೇದಾನಾಂ ಪಾರಗೋ ಭಾರತಂ ವದನ್ ॥

ಇಹ ಯುದ್ಧಾನಿ ಚಿತ್ರಾಣಿ ರಾಜ್ಞಾಂ ವೃದ್ಧಿರಿಹೈವ ಚ ।
ಋಷೀಣಾಂ ಚ ಕಥಾಸ್ತಾತ ಇಹ ಗಂಧರ್ವರಕ್ಷಸಾಮ್ ।
ಇಹ ತತ್ತತ್ ಸಮಾಸಾದ್ಯ ವಿಹಿತೋ ವಾಕ್ಯವಿಸ್ತರಃ ॥೪೦॥

ಇಲ್ಲಿ ವಿಚಿತ್ರವಾದ ಯುದ್ಧಗಳೂ, ರಾಜರುಗಳ ಅಭಿವೃದ್ಧಿಯೂ, ಋಷಿಗಳ, ಗಂಧರ್ವರ ಮತ್ತು ರಾಕ್ಷಸರ ಕಥೆಯೂ ಹೇಳಲ್ಪಟ್ಟಿದೆ. ಇಲ್ಲಿ ಈ ಎಲ್ಲಾ ವಿಷಯಗಳನ್ನೂ ಚೆನ್ನಾಗಿ ತಿಳಿದು ವಾಕ್ಯವಿಸ್ತಾರವನ್ನು ಹೆಣೆಯಲಾಗಿದೆ.

ತೀರ್ಥಾನಾಮಿಹ ಪುಣ್ಯಾನಾಂ ದರ್ಶನಂ ಚೈವ ಕೀರ್ತಿತಮ್ ।
ವನಾನಾಂ ಪರ್ವತಾನಾಂ ಚ ನದೀನಾಂ ಚ ನದಸ್ಯ ಚ ॥೪೧॥

ದೇಶಾನಾಂ ಚೈವ ದಿವ್ಯಾನಾಂ ಪುರಾಣಾಂ ಚೈವ ಕೀರ್ತಿತಮ್ ।
ಉಪಚಾರಸ್ತಥೈವಾಗ್ರ್ಯೋ ಯುದ್ಧಮಪ್ರತಿಮಾನುಷಮ್ ॥೪೨॥

ಇಲ್ಲಿ ಪುಣ್ಯತೀರ್ಥಗಳ ದರ್ಶನವನ್ನು ಮಾಡಬೇಕೆಂಬುದನ್ನೂ , ವನಗಳು, ಪರ್ವತಗಳು, ನದಿಗಳು ಮತ್ತು ನದಗಳನ್ನೂ ವರ್ಣಿಸಲಾಗಿದೆ. ಅನೇಕ ದೇಶಗಳನ್ನೂ

ದಿವ್ಯವಾದ ಪಟ್ಟಣಗಳನ್ನೂ ವರ್ಣಿಸಲಾಗಿದೆ. ಶ್ರೇಷ್ಠವಾದ ಅತಿಥಿಸತ್ಕಾರವನ್ನೂ ಮತ್ತು ಅಮಾನುಷವಾದ ಯುದ್ಧವನ್ನೂ ವರ್ಣಿಸಲಾಗಿದೆ.

**ಇಹ ಸತ್ಕಾರಯೋಗಶ್ಚ ಭಾರತೇ ಪರಮರ್ಷಿಣಾ ।**
**ರಥಾಶ್ವೇಭನರೇಂದ್ರಾಣಾಂ ಕಲ್ಪನಾ ಯುದ್ಧಕೌಶಲಮ್ ।**
**ಅಶ್ವಜಾತಿರನೇಕಾ ಚ ಸರ್ವಮಸ್ಮಿನ್ ಸಮರ್ಪಿತಮ್ ॥೪೩॥**

ಈ ಭಾರತದಲ್ಲಿ ವೇದವ್ಯಾಸರು ಸತ್ಕಾರದ ಪ್ರಕಾರಗಳನ್ನೂ, ಆನೆ, ಕುದುರೆ, ರಥ ಮತ್ತು ಕಾಲಾಳುಗಳ ಕಲ್ಪನೆಯನ್ನೂ ತಿಳಿಸಿದ್ದಾರೆ. ಯುದ್ಧಕೌಶಲವನ್ನೂ ಮತ್ತು ಅನೇಕ ಅಶ್ವಜಾತಿಗಳು ಮುಂತಾದ ಎಲ್ಲವನ್ನೂ ಇಲ್ಲಿ ವರ್ಣಿಸಲಾಗಿದೆ.

**ಯಥಾ ಸಮುದ್ರೋ ಭಗವಾನ್ ಯಥಾ ಚ ಹಿಮವಾನ್ ಗಿರಿಃ ।**
**ಖ್ಯಾತೌ ರತ್ನಾಕರೌ ತದ್ವನ್ಮಹಾಭಾರತಮುಚ್ಯತೇ ॥೪೪॥**

ಹೇಗೆ ಸಮುದ್ರವೂ ಮತ್ತು ಹಿಮಾಲಯ ಪರ್ವತವೂ ರತ್ನಾಕರಗಳೆಂದು ಪ್ರಸಿದ್ಧವಾಗಿವೆಯೋ ಹಾಗೆ ಮಹಾಭಾರತವು ಸೂಕ್ತಿರತ್ನಾಕರವೆಂದು ಪ್ರಸಿದ್ಧವಾಗಿದೆ.

**ನಾಪ್ರೀತಿರುಪಪದ್ಯೇತ ಯಥಾ ಪ್ರಾಪ್ಯ ತ್ರಿವಿಷ್ಟಪಮ್ ।**
**ಪುಣ್ಯಂ ತಥೇದಮಾಖ್ಯಾನಂ ಶ್ರುತ್ವಾ ಪ್ರೀತಿರ್ಭವತ್ಯುತ ।**
**ಕುಲಸ್ಯ ವೃದ್ಧಯೇ ರಾಜನ್ನಾಯುಷೋ ವಿಜಯಾಯ ಚ ॥೪೫॥**

ಸ್ವರ್ಗಲೋಕವನ್ನು ಹೊಂದಿದವರು ಹೇಗೆ ಅಸಮಾಧಾನಪಡಲು ಕಾರಣವಿಲ್ಲವೋ ಹಾಗೆಯೇ ಈ ಮಹಾಭಾರತವನ್ನು ಶ್ರವಣಮಾಡಿ ಅಸಂತೋಷದಿಂದಿರಲು ಸಾಧ್ಯವಿಲ್ಲ. ಇದರಿಂದ ಕುಲದ ವೃದ್ಧಿಯೂ, ಆಯುಸ್ಸಿನ ವೃದ್ಧಿಯೂ ಮತ್ತು ವಿಜಯವೂ ಉಂಟಾಗುತ್ತದೆ.

**ಶೃಣು ಕೀರ್ತಯತಃ ಕೃತ್ಸ್ನಮಿತಿಹಾಸಂ ಪುರಾತನಮ್ ।**
**ಶ್ರಾವಯೋಬ್ರಾಹ್ಮಣಾನ್ ಶ್ರಾದ್ಧೇ ಯಶ್ಚೇಮಂ ಪಾದಮಂತತಃ ॥೪೬॥**

ಈ ಸಮಗ್ರವಾದ ಆಖ್ಯಾನವನ್ನು ಹೇಳುವವರಿಗೆ ಮತ್ತು ಪಿತೃಕಾರ್ಯಸಂದರ್ಭದಲ್ಲಿ ಬ್ರಾಹ್ಮಣರನ್ನುದ್ದೇಶಿಸಿ ಒಂದು ಪಾದವನ್ನಾದರೂ ಹೇಳುವವರಿಗೆ ಉಂಟಾಗುವ ಫಲವನ್ನು ಕೇಳು.

ಅಕ್ಷಯಂ ಸ್ವರ್ಗಗಾಮೀಯಮುಪಾವರ್ತೇತ್ ಪಿತೄನಿಹ ।
ಪ್ರಾತರ್ಯದೇನಃ ಕುರುತೇ ಇಂದ್ರಿಯೈರ್ಬ್ರಾಹ್ಮಣಶ್ಚರನ್ ॥೪೭॥

ಮಹಾಭಾರತಮಾಖ್ಯಾಯ ಪಶ್ಚಾತ್ ಸಂಧ್ಯಾಂ ಪ್ರಮುಚ್ಯತೇ ।
ರಾತ್ರ್ಯಾಂ ಯದೇನಃ ಕುರುತ ಇಂದ್ರಿಯೈರ್ಬ್ರಾಹ್ಮಣಶ್ಚರನ್ ।
ಮಹಾಭಾರತಮಾಖ್ಯಾಯ ಪೂರ್ವಾಂ ಸಂಧ್ಯಾಂ ಪ್ರಮುಚ್ಯತೇ ॥

ಸ್ವರ್ಗಕ್ಕೆ ಹೋಗುವವರು ಅಪೇಕ್ಷಿಸುವ ಅಕ್ಷಯವಾದ ಪುಣ್ಯವು ದೊರೆಯುತ್ತದೆ. ಪ್ರಾತಃಕಾಲದಲ್ಲಿ ಮಾಡಿದ ಪಾಪಗಳು ಸಾಯಂಕಾಲದಲ್ಲಿ ಭಾರತವನ್ನು ಹೇಳುವುದರಿಂದ ಸಾಯಂಕಾಲದಲ್ಲಿ ನಾಶವಾಗುತ್ತವೆ. ಹಾಗೆಯೇ ರಾತ್ರಿಯಕಾಲದಲ್ಲಿ ಮಾಡಿದ ಪಾಪಗಳು ಪ್ರಾತಃಕಾಲದಲ್ಲಿ ಭಾರತವನ್ನು ಹೇಳುವುದರಿಂದ ಪ್ರಾತಃಕಾಲದಲ್ಲಿ ನಾಶಹೊಂದುತ್ತವೆ.

[೧]ಭಾರತಾನಾಂ ಮಹಜ್ಜನ್ಮ ಮಹಾಭಾರತಮುಚ್ಯತೇ ।
ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥೪೯॥

ತ್ರಿಭಿರ್ವರ್ಷೈರ್ಮಹಾರಾಜ ಕೃಷ್ಣದ್ವೈಪಾಯೋಽಬ್ರವೀತ್ ।
ನಿತ್ಯೋತ್ಥಿತೋ ಮಹಾಯೋಗೀ ಮಹಾಭಾರತಮಾದಿತಃ ॥೫೦॥

೧ ಮಹತ್ತ್ವಾತ್ ಭಾರವತ್ತ್ವಾಚ್ಚ, ಪಾಠಾಂತರ

ವೇದವ್ಯಾಸರು ಅವತಾರ ಮಾಡಿದ ನಂತರ ಮೂರನೆಯ ವರ್ಷದಲ್ಲಿ ಮಹಾಭಾರತವನ್ನು ರಚಿಸಿದರು. ಭರತವಂಶದಲ್ಲಿ ಜನಿಸಿದವರ ಶ್ರೇಷ್ಠವಾದ ಜನ್ಮವನ್ನು ನಿರೂಪಿಸುವುದರಿಂದ ಇದಕ್ಕೆ ಮಹಾಭಾರತವೆಂದು ಹೆಸರು. ಈ ನಿರ್ವಚನವನ್ನು ತಿಳಿದವನು ಸರ್ವಪಾಪಗಳಿಂದಲೂ ನಿರ್ಮುಕ್ತನಾಗುತ್ತಾನೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಪಂಚಪಂಚಾಶತ್ತಮೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ತೃತೀಯೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಐವತ್ತೈದನೆಯ ಅಧ್ಯಾಯ ಮುಗಿಯಿತು.



ದಿವ್ಯವಾದ ಪಟ್ಟಣಗಳನ್ನೂ ವರ್ಣಿಸಲಾಗಿದೆ. ಶ್ರೇಷ್ಠವಾದ ಅತಿಥಿಸತ್ಕಾರವನ್ನೂ ಮತ್ತು ಅಮಾನುಷವಾದ ಯುದ್ಧವನ್ನೂ ವರ್ಣಿಸಲಾಗಿದೆ.

**ಇಹ ಸತ್ಕಾರಯೋಗಶ್ಚ ಭಾರತೇ ಪರಮರ್ಷಿಣಾ ।**
**ರಥಾಶ್ವೇಭನರೇಂದ್ರಾಣಾಂ ಕಲ್ಪನಾ ಯುದ್ಧಕೌಶಲಮ್ ।**
**ಅಶ್ವಜಾತಿರನೇಕಾ ಚ ಸರ್ವಮಸ್ಮಿನ್ ಸಮರ್ಪಿತಮ್ ॥೪೩॥**

ಈ ಭಾರತದಲ್ಲಿ ವೇದವ್ಯಾಸರು ಸತ್ಕಾರದ ಪ್ರಕಾರಗಳನ್ನೂ, ಆನೆ, ಕುದುರೆ, ರಥ ಮತ್ತು ಕಾಲಾಳುಗಳ ಕಲ್ಪನೆಯನ್ನೂ ತಿಳಿಸಿದ್ದಾರೆ. ಯುದ್ಧಕೌಶಲವನ್ನೂ ಮತ್ತು ಅನೇಕ ಅಶ್ವಜಾತಿಗಳು ಮುಂತಾದ ಎಲ್ಲವನ್ನೂ ಇಲ್ಲಿ ವರ್ಣಿಸಲಾಗಿದೆ.

**ಯಥಾ ಸಮುದ್ರೋ ಭಗವಾನ್ ಯಥಾ ಚ ಹಿಮವಾನ್ ಗಿರಿಃ ।**
**ಖ್ಯಾತೌ ರತ್ನಾಕರೌ ತದ್ವನ್ಮಹಾಭಾರತಮುಚ್ಯತೇ ॥೪೪॥**

ಹೇಗೆ ಸಮುದ್ರವೂ ಮತ್ತು ಹಿಮಾಲಯ ಪರ್ವತವೂ ರತ್ನಾಕರಗಳೆಂದು ಪ್ರಸಿದ್ಧವಾಗಿವೆಯೋ ಹಾಗೆ ಮಹಾಭಾರತವು ಸೂಕ್ತಿರತ್ನಾಕರವೆಂದು ಪ್ರಸಿದ್ಧವಾಗಿದೆ.

**ನಾಪ್ರೀತಿರುಪಪದ್ಯೇತ ಯಥಾ ಪ್ರಾಪ್ಯ ತ್ರಿವಿಷ್ಟಪಮ್ ।**
**ಪುಣ್ಯಂ ತಥೇದಮಾಖ್ಯಾನಂ ಶ್ರುತ್ವಾ ಪ್ರೀತಿರ್ಭವತ್ಯುತ ।**
**ಕುಲಸ್ಯ ವೃದ್ಧಯೇ ರಾಜನ್ನಾಯುಷೋ ವಿಜಯಾಯ ಚ ॥೪೫॥**

ಸ್ವರ್ಗಲೋಕವನ್ನು ಹೊಂದಿದವರು ಹೇಗೆ ಅಸಮಾಧಾನಪಡಲು ಕಾರಣವಿಲ್ಲವೋ ಹಾಗೆಯೇ ಈ ಮಹಾಭಾರತವನ್ನು ಶ್ರವಣಮಾಡಿ ಅಸಂತೋಷದಿಂದಿರಲು ಸಾಧ್ಯವಿಲ್ಲ. ಇದರಿಂದ ಕುಲದ ವೃದ್ಧಿಯೂ, ಆಯುಸ್ಸಿನ ವೃದ್ಧಿಯೂ ಮತ್ತು ವಿಜಯವೂ ಉಂಟಾಗುತ್ತದೆ.

**ಶೃಣು ಕೀರ್ತಯತಃ ಕೃತ್ಸ್ನಮಿತಿಹಾಸಂ ಪುರಾತನಮ್ ।**
**ಶ್ರಾವಯೋಬ್ರಾಹ್ಮಣಾನ್ ಶ್ರಾದ್ಧೇ ಯಶ್ಚೇಮಂ ಪಾದಮಂತತಃ ॥೪೬॥**

ಈ ಸಮಗ್ರವಾದ ಆಖ್ಯಾನವನ್ನು ಹೇಳುವವರಿಗೆ ಮತ್ತು ಪಿತೃಕಾರ್ಯಸಂದರ್ಭದಲ್ಲಿ ಬ್ರಾಹ್ಮಣರನ್ನುದ್ದೇಶಿಸಿ ಒಂದು ಪಾದವನ್ನಾದರೂ ಹೇಳುವವರಿಗೆ ಉಂಟಾಗುವ ಫಲವನ್ನು ಕೇಳು.

ಅಕ್ಷಯಂ ಸ್ವರ್ಗಗಾಮೀಯಮುಪಾವರ್ತೇತ್ ಪಿತೃನಿಹ ।
ಪ್ರಾತರ್ಯದೇನಃ ಕುರುತೇ ಇಂದ್ರಿಯೈರ್ಬ್ರಾಹ್ಮಣಶ್ಚರನ್ ॥೪೭॥

ಮಹಾಭಾರತಮಾಖ್ಯಾಯ ಪಶ್ಚಾತ್ ಸಂಧ್ಯಾಂ ಪ್ರಮುಚ್ಯತೇ ।
ರಾತ್ರ್ಯಾಂ ಯದೇನಃ ಕುರುತ ಇಂದ್ರಿಯೈರ್ಬ್ರಾಹ್ಮಣಶ್ಚರನ್ ।
ಮಹಾಭಾರತಮಾಖ್ಯಾಯ ಪೂರ್ವಾಂ ಸಂಧ್ಯಾಂ ಪ್ರಮುಚ್ಯತೇ ॥

ಸ್ವರ್ಗಕ್ಕೆ ಹೋಗುವವರು ಅಪೇಕ್ಷಿಸುವ ಅಕ್ಷಯವಾದ ಪುಣ್ಯವು ದೊರೆಯುತ್ತದೆ. ಪ್ರಾತಃಕಾಲದಲ್ಲಿ ಮಾಡಿದ ಪಾಪಗಳು ಸಾಯಂಕಾಲದಲ್ಲಿ ಭಾರತವನ್ನು ಹೇಳುವುದರಿಂದ ಸಾಯಂಕಾಲದಲ್ಲಿ ನಾಶವಾಗುತ್ತವೆ. ಹಾಗೆಯೇ ರಾತ್ರಿಯಕಾಲದಲ್ಲಿ ಮಾಡಿದ ಪಾಪಗಳು ಪ್ರಾತಃಕಾಲದಲ್ಲಿ ಭಾರತವನ್ನು ಹೇಳುವುದರಿಂದ ಪ್ರಾತಃಕಾಲದಲ್ಲಿ ನಾಶಹೊಂದುತ್ತವೆ.

[೧]ಭಾರತಾನಾಂ ಮಹಜ್ಜನ್ಮ ಮಹಾಭಾರತಮುಚ್ಯತೇ ।
ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥೪೯॥

ತ್ರಿಭಿರ್ವರ್ಷೈರ್ಮಹಾರಾಜ ಕೃಷ್ಣದ್ವೈಪಾಯೋಽಬ್ರವೀತ್ ।
ನಿತ್ಯೋತ್ಥಿತೋ ಮಹಾಯೋಗೀ ಮಹಾಭಾರತಮಾದಿತಃ ॥೫೦॥

೧ ಮಹತ್ವಾತ್ ಭಾರವತ್ವಾಚ್ಚ, ಪಾಠಾಂತರ

ವೇದವ್ಯಾಸರು ಅವತಾರ ಮಾಡಿದ ನಂತರ ಮೂರನೆಯ ವರ್ಷದಲ್ಲಿ ಮಹಾಭಾರತವನ್ನು ರಚಿಸಿದರು. ಭರತವಂಶದಲ್ಲಿ ಜನಿಸಿದವರ ಶ್ರೇಷ್ಠವಾದ ಜನ್ಮವನ್ನು ನಿರೂಪಿಸುವುದರಿಂದ ಇದಕ್ಕೆ ಮಹಾಭಾರತವೆಂದು ಹೆಸರು. ಈ ನಿರ್ವಚನವನ್ನು ತಿಳಿದವನು ಸರ್ವಪಾಪಗಳಿಂದಲೂ ನಿರ್ಮುಕ್ತನಾಗುತ್ತಾನೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ
ಪಂಚಪಂಚಾಶತ್ತಮೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ತೃತೀಯೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಐವತ್ತೈದನೆಯ ಅಧ್ಯಾಯ ಮುಗಿಯಿತು.



## ಐವತ್ತಾರನೆಯ ಅಧ್ಯಾಯ

### (ಪುರುವಂಶ ನಿರೂಪಣೆ)

ವೈಶಂಪಾಯನಃ

ಪುರೋರ್ವಂಶಂ ಮಹಾಧನ್ಯಂ ರಾಜ್ಞಾಮಮಿತತೇಜಸಾಮ್ ।
ಪ್ರವಕ್ಷ್ಯಾಮಿ ಪಿತೃಣಾಂ ತೇ ತೇಷಾಂ ನಾಮಾನಿ ಮೇ ಶೃಣು ॥೧॥

ಮಹಾಧನ್ಯವಾದ ಪುರುವಂಶವನ್ನೂ ಅದರಲ್ಲಿ ಜನಿಸಿದ ಮಹಾಪರಾಕ್ರಮಶಾಲಿ ರಾಜರುಗಳಾದ ನಿನ್ನ ಪಿತೃಗಳ ಹೆಸರುಗಳನ್ನೂ ನಾನು ಹೇಳುತ್ತೇನೆ ಕೇಳು.

ಅವ್ಯಕ್ತಪ್ರಭವೋ ಬ್ರಹ್ಮಾ ಶಾಶ್ವತೋ ನಿತ್ಯ ಅವ್ಯಯಃ ।
ತಸ್ಮಾನ್ಮರೀಚಿಃ ಸಂಜಜ್ಞೇ ದಕ್ಷಶ್ಚೈವ ಪ್ರಜಾಪತಿಃ ॥೨॥

ಅವ್ಯಕ್ತಸ್ವಭಾವದವನಾದ ನಾರಾಯಣನಿಂದ ನಾರಾಯಣನಂತೆ ಶಾಶ್ವತನೂ, ನಿತ್ಯನೂ, ಅವ್ಯಯನೂ ಆದ ಬ್ರಹ್ಮನು ಜನಿಸಿದನು. ಬ್ರಹ್ಮನಿಂದ ಮರೀಚಿಗಳೂ ಮತ್ತು ದಕ್ಷಪ್ರಜಾಪತಿಯೂ ಜನಿಸಿದರು.

ಅಂಗುಷ್ಠಾದ್ ದಕ್ಷಮಸೃಜಚ್ಚಕ್ಷುರ್ಭ್ಯಾಂ ಚ ಮರೀಚಿನಮ್ ।
ಮರೀಚೇಃ ಕಾಶ್ಯಪಃ ಪುತ್ರೋ ದಕ್ಷಸ್ಯ ದುಹಿತಾಽದಿತಿಃ ॥೩॥

ಬ್ರಹ್ಮನು ಅಂಗುಷ್ಠದಿಂದ ದಕ್ಷನನ್ನೂ, ನೇತ್ರಗಳಿಂದ ಮರೀಚಿಗಳನ್ನೂ ಸೃಜಿಸಿದನು. ಮರೀಚಿಯ ಮಕ್ಕಳು ಕಶ್ಯಪರು. ದಕ್ಷನ ಮಗಳು ಅದಿತಿ.

ಅದಿತ್ಯಾಂ ಕಾಶ್ಯಪಸ್ಯ ವಿವಸ್ವಾನ್ । ವಿವಸ್ವತೋ ಮನುಃ ಮನೋ-
ರಿಳಾ ॥ ಇಳಾಯಾಃ ಪುರೂರವಾಃ । ಪುರೂರವಸ ಆಯುಃ ।
ಆಯುಷೋ ನಹುಷಃ । ನಹುಷಸ್ಯ ಯಯಾತಿಃ ॥೪॥

ಕಶ್ಯಪರಿಗೆ ಅದಿತಿಯಲ್ಲಿ ವಿವಸ್ವಂತನು ಪುತ್ರನಾಗಿ ಜನಿಸಿದನು. ವಿವಸ್ವಂತನ ಮಗ ಮನು. ಮನುವಿನ ಮಗಳು ಇಳಾ. ಇಳೆಯ ಮಗ ಪುರೂರವ. ಪುರೂರವನ ಮಗ ಆಯು. ಆಯುವಿನ ಮಗ ನಹುಷ. ನಹುಷನ ಮಗ ಯಯಾತಿ.

**ಯಯಾತೇರ್ದ್ವೇ ಭಾರ್ಯೇ ಬಭೂವತುಃ । ಉಶನಸೋ ದುಹಿತಾ**
**ದೇವಯಾನೀ । ವೃಷಪರ್ವಣಶ್ಚ ದುಹಿತಾ ಶರ್ಮಿಷ್ಠಾ ನಾಮ ॥೫॥**

ಯಯಾತಿಗೆ ಇಬ್ಬರು ಪತ್ನಿಯರಿದ್ದರು. ಶುಕ್ರಾಚಾರ್ಯರ ಮಗಳಾದ ದೇವಯಾನಿ ಒಬ್ಬಳು. ವೃಷಪರ್ವನ ಮಗಳಾದ ಶರ್ಮಿಷ್ಠೆ ಇನ್ನೊಬ್ಬಳು.

**ತತ್ರಾನುವಂಶೋ ಭವತಿ ॥೬॥**

**ಯದುಂ ಚ ತುರ್ವಶುಂ ಚೋಭೌ ದೇವಯಾನೀ ವ್ಯಜಾಯತ ।**
**ದ್ರುಹ್ಯುಂ ಚಾನುಂ ಚ ಪೂರುಂ ಚ ಶರ್ಮಿಷ್ಠಾ ವಾರ್ಷಪರ್ವಣೀ ॥೭॥**

ಈ ವಂಶವನ್ನು ವರ್ಣನೆ ಮಾಡಲು ಅನುಕೂಲವಾದ ಶ್ಲೋಕ ಹೀಗಿದೆ - ದೇವಯಾನಿಯು ಯದು ಮತ್ತು ತುರ್ವಶು ಎಂಬ ಎರಡು ಮಕ್ಕಳನ್ನು ಪಡೆದಳು. ವೃಷಪರ್ವನ ಮಗಳಾದ ಶರ್ಮಿಷ್ಠೆಯು ದ್ರುಹ್ಯು, ಅನು, ಮತ್ತು ಪೂರು ಎಂಬ ಮೂರು ಮಕ್ಕಳನ್ನು ಪಡೆದಳು.

**ತತ್ರ ಯದೋರ್ಯಾದವಾಃ । ಪೂರೋಃ ಪೌರವಾಃ ।**
**ಪೂರೋರ್ಭಾರ್ಯಾ ಕೌಸಲ್ಯಾ ಬಭೂವ ।**
**ತಸ್ಯಾಮಸ್ಯ ಜಜ್ಞೇ ಜನಮೇಜಯಃ ॥೮॥**

ಅವರಲ್ಲಿ ಯದುವಿನಿಂದ ಯಾದವರು ಜನಿಸಿದರು. ಪೂರುವಿನಿಂದ ಪೌರವರು. ಪೂರುವಿನ ಪತ್ನಿ ಕೋಸಲದೇಶದ ರಾಜಕುಮಾರಿ. ಅವಳಲ್ಲಿ ಅವನಿಗೆ ಜನಮೇಜಯನು ಜನಿಸಿದನು.

**ಸ ತ್ರೀನ್ ಹಯಮೇಧಾನಾಜಹಾರ ।**
**ವಿಶ್ವಜಿತಾ ಚೇಷ್ಟ್ವಾ ವನಂ ಪ್ರವಿವೇಶ ॥೯॥**

ಜನಮೇಜಯನು ಮೂರು ಅಶ್ವಮೇಧಯಾಗಗಳನ್ನು ಮಾಡಿದನು. ಅನಂತರ ವಿಶ್ವಜಿತ್ ಎಂಬ ಯಾಗವನ್ನು ಮಾಡಿ (ತಪಸ್ಸಿಗಾಗಿ) ಕಾಡಿಗೆ ಹೋದನು.

**ಜನಮೇಜಯಸ್ತು ಖಲು ಸುನಂದಾಂ ನಾಮೋಪಯೇಮೇ । ಮಾಗಧಿಃ ತಸ್ಯಾಮಸ್ಯ ಜಜ್ಞೇ ಪ್ರಾಚೀನ್ವಾನ್ ॥೧೦॥**

ಜನಮೇಜಯನು ಸುನಂದೆಯನ್ನು ವಿವಾಹವಾಗಿದ್ದನು. ಅವಳಲ್ಲಿ ಅವನಿಗೆ ಮಗಧವಂಶದ ಪ್ರಾಚೀನ್ವಾನ್ ಎಂಬ ಮಗನು ಜನಿಸಿದನು.

**ಯಃ ಪ್ರಾಚೀಂ ದಿಶಂ ಜಿಗಾಯ ಯಾವತ್ಸೂರ್ಯೋದಯಾತ್ । ತತ್ತಸ್ಯ ಪ್ರಾಚೀತ್ವಮ್ ॥೧೧॥**

ಅವನು ಸೂರ್ಯೋದಯ ಕಾಲದಷ್ಟು ಕಾಲದಲ್ಲಿಯೇ ಸಮಗ್ರವಾದ ಪೂರ್ವ ದಿಕ್ಕನ್ನು ಜಯಿಸಿದನು. ಆದ್ದರಿಂದ ಅವನಿಗೆ ಪ್ರಾಚೀನ್ವಂತ ಎಂದು ಹೆಸರು.

**ಪ್ರಾಚೀನ್ವಾಂಸ್ತು ಖಲ್ವಾಶ್ಮಕೀಮುಪಯೇಮೇ ಸುಷ್ಠುವಾಂ ನಾಮ ಯಾದವೀಮ್ । ತಸ್ಯಾಮಸ್ಯ ಜಜ್ಞೇ ಶಯ್ಯಾತಿಃ ॥೧೨॥**

ಪ್ರಾಚೀನ್ವಂತನು ಅಶ್ಮಕನ ಮಗಳಾದ ಸುಷ್ಠುವಾ ಎಂಬ ಯಾದವಿಯನ್ನು ವಿವಾಹವಾದನು. ಅವಳಲ್ಲಿ ಅವನಿಗೆ ಶಯ್ಯಾತಿ ಎಂಬ ಮಗನು ಜನಿಸಿದನು.

**ಶಯ್ಯಾತಿಸ್ತು ತ್ರಿಶಂಕೋರ್ದುಹಿತರಂ ವರಾಂಗೀಂ ನಾಮೋಪಯೇಮೇ । ತಸ್ಯಾಮಸ್ಯ ಜಜ್ಞೇಽಹಂಪಾತಿಃ ॥೧೩॥**

ಶಯ್ಯಾತಿಯು ತ್ರಿಶಂಕುವಿನ ಮಗಳಾದ ವರಾಂಗಿಯನ್ನು ವಿವಾಹವಾದನು. ಅವಳಲ್ಲಿ ಅವನಿಗೆ ಅಹಂಪಾತಿ ಎಂಬ ಮಗನು ಜನಿಸಿದನು.

**ಅಹಂಪಾತಿಸ್ತು ಖಲು ಕೃತವೀರ್ಯದುಹಿತರಮುಪಯೇಮೇ ಭಾನುಮತೀಂ ನಾಮ । ತಸ್ಯಾಮಸ್ಯ ಸಾರ್ವಭೌಮಃ ॥೧೪॥**

ಅಹಂಪಾತಿಯು ಕೃತವೀರ್ಯನ ಮಗಳಾದ ಭಾನುಮತಿಯನ್ನು ವಿವಾಹಮಾಡಿಕೊಂಡನು. ಅವಳಲ್ಲಿ ಅವನಿಗೆ ಸಾರ್ವಭೌಮನೆಂಬ ಮಗನು ಜನಿಸಿದನು.

**ಸಾರ್ವಭೌಮಸ್ತು ಖಲು ಜಿತ್ವಾಽಽಜಹಾರ ಕೈಕಯೀಂ ಸುಂದರಾಂ ನಾಮ । ತಸ್ಯಾಮಸ್ಯ ಜಜ್ಞೇ ಜಯತ್ಸೇನಃ ॥೧೫॥**

ಸಾರ್ವಭೌಮನು ಕೇಕಯದೇಶದ ರಾಜಕುಮಾರಿಯಾದ ಸುಂದರೆಯನ್ನು ವೀರ್ಯಪರಾಕ್ರಮಗಳಿಂದ ಸಂಪಾದಿಸಿ ತಂದನು. ಅವಳಲ್ಲಿ ಅವನಿಗೆ ಜಯತ್ಸೇನನು ಜನಿಸಿದನು.

**ಜಯತ್ಸೇನಸ್ತು ಖಲು ವೈದರ್ಭೀಮುಪಯೇಮೇ ಸುಷಾವಾಂ**
**ನಾಮ । ತಸ್ಯಾಮಸ್ಯ ಜಜ್ಞೇ ಅಪರಾಚೀನಃ ॥೧೬॥**

ಜಯತ್ಸೇನನು ವಿದರ್ಭರಾಜಕುಮಾರಿಯಾದ ಸುಷಾವಾಳನ್ನು ವಿವಾಹಮಾಡಿಕೊಂಡನು. ಅವಳಲ್ಲಿ ಅವನಿಗೆ ಅಪರಾಚೀನನು ಜನಿಸಿದನು.

**ಅಪರಾಚೀನಸ್ತು ಖಲು ವೈದರ್ಭೀಮಪರಾಮುಪಯೇಮೇ**
**ಮರ್ಯಾದಾಂ ನಾಮ । ತಸ್ಯಾಮಸ್ಯ ಜಜ್ಞೇ ಋಕ್ಷಃ ॥೧೭॥**

ಅಪರಾಚೀನನು ಮರ್ಯಾದಾ ಎಂಬ ವಿದರ್ಭದೇಶದ ಇನ್ನೊಬ್ಬ ಕನ್ಯೆಯನ್ನು ವಿವಾಹಮಾಡಿಕೊಂಡನು. ಅವಳಲ್ಲಿ ಅವನಿಗೆ ಋಕ್ಷನು ಜನಿಸಿದನು.

**ಋಕ್ಷಸ್ತು ವಾಮದೇವ್ಯಾಮಂಗರಾಜಕನ್ಯಾಯಾಮೃಕ್ಷಂ ಪುತ್ರಮಜೀಜನತ್ ॥**

ಋಕ್ಷನಾದರೋ ಅಂಗಾರರಾಜನ ಮಗಳಾದ ವಾಮದೇವಿಯನ್ನು ಮದುವೆಮಾಡಿಕೊಂಡು ಅವಳಲ್ಲಿ ಋಕ್ಷನೆಂಬ ಮಗನನ್ನು ಪಡೆದನು.

**ಋಕ್ಷಸ್ತು ಖಲು ತಕ್ಷಕದುಹಿತರಂ ಜ್ವಲಂತೀಂ ನಾಮೋಪಯೇಮೇ ।**
**ತಸ್ಯಾಮಂತಿನಾರಮುತ್ಪಾದಯಾಮಾಸ ॥೧೮॥**

ಋಕ್ಷನು ತಕ್ಷಕನ ಮಗಳಾದ ಜ್ವಲಂತೀ ಎಂಬ ಕನ್ಯೆಯನ್ನು ವಿವಾಹಮಾಡಿಕೊಂಡು ಅವಳಲ್ಲಿ ಅಂತಿನಾರನೆಂಬ ಮಗನನ್ನು ಪಡೆದನು.

**ಅಂತಿನಾರಸ್ತು ಸರಸ್ವತ್ಯಾಂ ದ್ವಾದಶವಾರ್ಷಿಕಂ ಸತ್ರಮಾಜಹಾರ ।**
**ತಮುದವಸಾನೇ ನಿವೃತ್ತೇ ಸರಸ್ವತ್ಯಭಿಗಮ್ಯ ಭರ್ತಾರಂ**
**ವರಯಾಮಾಸ । ತಸ್ಯಾಂ ಪುತ್ರಂ ಜನಯಾಮಾಸ ತ್ರಸುಂ ನಾಮ ॥**

ಅಂತಿನಾರನು ಸರಸ್ವತೀ ನದಿಯ ತೀರದಲ್ಲಿ ಹನ್ನೆರಡುವರ್ಷಗಳ ಕಾಲದ ಒಂದು ಸತ್ರಯಾಗವನ್ನು ಮಾಡಿದನು. ಆ ಉತ್ಸವದ ಕೊನೆಯಲ್ಲಿ ಸರಸ್ವತಿಯು (ನದಿ) ಬಂದು ಅಂತಿನಾರನನ್ನು ವರಿಸಿದಳು. ಅವಳಲ್ಲಿ ಅವನಿಗೆ ತ್ರಸು ಎಂಬ ಮಗನು ಹುಟ್ಟಿದನು.

**ಅತ್ರಾನುವಂಶೋ ಭವತಿ ॥**

**ತ್ರಸ್ನುಃ ಸರಸ್ವತೀಪುತ್ರ ಅಂತಿನಾರಾದಜಾಯತ ।**
**ಇಲಿಲಂ ಜನಯಾಮಾಸ ಕಾಲಿಂದ್ಯಾಂ ತ್ರಸ್ನುರಾತ್ಮಜಮ್ ॥೨೧॥**

ಆ ವಂಶವನ್ನು ವರ್ಣನೆ ಮಾಡಲು ಅನುಕೂಲವಾದ ಶ್ಲೋಕ ಹೀಗಿದೆ-

ತ್ರಸ್ನುವು ಅಂತಿನಾರನಿಂದ ಸರಸ್ವತಿಯಲ್ಲಿ ಪುತ್ರನಾಗಿ ಜನಿಸಿದನು. ತ್ರಸುವು ಕಾಳಿಂದಿಯನ್ನು ವಿವಾಹಮಾಡಿಕೊಂಡು ಇಲಿಲ ಎಂಬ ಮಗನನ್ನು ಪಡೆದನು.

**ಸ ಏವ ದುಷ್ಷಂತೋ ವಿಶ್ವಾಮಿತ್ರದುಹಿತರಂ ಶಕುಂತಲಾಂ ನಾಮ ।**
**ತಸ್ಯಾಮಸ್ಯ ಜಜ್ಞೇ ಭರತಃ ॥೨೨॥**

ಇಲಿಲನೇ ದುಷ್ಷಂತ - ಅವನು ವಿಶ್ವಾಮಿತ್ರರ ಮಗಳಾದ ಶಕುಂತಲೆಯನ್ನು ವಿವಾಹಮಾಡಿಕೊಂಡನು.ಅವಳಲ್ಲಿ ಅವನಿಗೆ ಭರತನು ಮಗನಾಗಿ ಜನಿಸಿದನು.

**ತತ್ರೇಮೌ ಶ್ಲೋಕೌ ಭವತಃ**

**ಮಾತಾ ಭಸ್ತ್ರಾ ಪಿತುಃ ಪುತ್ರೋ ಯಸ್ಮಾಜ್ಜಾತಃ ಸ ಏವ ಸಃ ।**
**ಭರಸ್ವ ಪುತ್ರಂ ದುಷ್ಷಂತ ಸತ್ಯಮಾಹ ಶಕುಂತಲಾ ॥೨೩॥**

ಆ ವಿಷಯದಲ್ಲಿ ಈ ಎರಡು ಶ್ಲೋಕಗಳಿವೆ.

ತಾಯಿಯು ತಿದಿ (ಇದ್ದಂತೆ). ಯಾವನಿಂದ ಹುಟ್ಟಿದ್ದಾನೆಯೋ ಆ ಮಗನು ಆ ತಂದೆಗೇ ಸೇರಿದವನು. ಎಲೈ ದುಷ್ಷಂತನೇ ಭರತನನ್ನು ಸಾಕು. ಶಕುಂತಲೆಯು ಸತ್ಯವನ್ನು ಹೇಳುತ್ತಿದ್ದಾಳೆ.

**ರೇತೋಧಾಃ ಪುತ್ರಂ ನಯತಿ ನರದೇವ ಯಮಕ್ಷಯಮ್ ।**
**ತ್ವಂ ಚಾಸ್ಯ ಧಾತಾ ಗರ್ಭಸ್ಯ ಸತ್ಯಮಾಹ ಶಕುಂತಲಾ ॥೨೪॥**

ಎಲೈ ರಾಜನೇ ಮಗನು ತಂದೆಯನ್ನು ಅಕ್ಷಯಲೋಕಗಳಿಗೆ ಕರೆದೊಯ್ಯುತ್ತಾನೆ. ಶಕುಂತಲೆಯಲ್ಲಿ ಗರ್ಭಾಧಾನ ಮಾಡಿದವನು ನೀನು. ಶಕುಂತಲೆಯು ಸತ್ಯವನ್ನು ಹೇಳುತ್ತಿದ್ದಾಳೆ. (ವಿಭಕ್ತಿ ವಿಪರಿಣಾಮದಿಂದ ಅರ್ಥಮಾಡಬೇಕು).

**ತತೋಽಸ್ಯ ಭರತತ್ವಮ್ ॥೨೫॥**

ಆದ್ದರಿಂದ ಅವನಿಗೆ ಭರತ (ಸಾಕಲ್ಪಟ್ಟವನು) ಎಂದು ಹೆಸರು.

**ಭರತಸ್ತು ಖಲು ಕಾಶೇಯೀಂ ಸಾರ್ವಸೇನೀಮುಪಯೇಮೇ
ಸುನಂದಾಂ ನಾಮ । ತಸ್ಯಾಮಸ್ಯ ಜಜ್ಞೇ ಭುಮನ್ಯುಃ ॥೨೬॥**

ಭರತನು ಕಾಶಿರಾಜನ ಮಗಳಾದ ಸುನಂದೆಯನ್ನು ವಿವಾಹಮಾಡಿಕೊಂಡನು. ಅವಳಲ್ಲಿ ಅವನಿಗೆ ಭುಮನ್ಯುವು ಜನಿಸಿದನು.

**ಭುಮನ್ಯುಸ್ತು ಖಲು ದಾಶಾರ್ಹೀಮುಪಯೇಮೇ ಸುಪರ್ಣಾಂ
ನಾಮ । ತಸ್ಯಾಮಸ್ಯ ಜಜ್ಞೇ ಸುಹೋತ್ರಃ ॥೨೭॥**

ಭುಮನ್ಯುವಾದರೋ ದಾಶಾರ್ಹಾಧಿಪತಿಯ ಮಗಳಾದ ಸುಪರ್ಣಾ ಎಂಬ ಕನ್ಯೆಯನ್ನು ವಿವಾಹಮಾಡಿಕೊಂಡನು. ಅವಳಲ್ಲಿ ಅವನಿಗೆ ಸುಹೋತ್ರನು ಜನಿಸಿದನು.

**ಸುಹೋತ್ರಸ್ತು ಖಲ್ವೈಕ್ಷ್ವಾಕೀಮುಪಯೇಮೇ ಜಯಂತೀಂ ನಾಮ ।
ತಸ್ಯಾಮಸ್ಯ ಜಜ್ಞೇ ಹಸ್ತೀ । ಯ ಇದಂ ಪುರಂ ಸ್ಥಾಪಯಾಮಾಸ ।
ತಸ್ಮಾದ್ಧಸ್ತಿನಪುರತ್ವಮ್ ॥೨೮॥**

ಸುಹೋತ್ರನಾದರೋ ಇಕ್ಷ್ವಾಕುವಂಶದ ಜಯಂತಿಯನ್ನು ವಿವಾಹಮಾಡಿಕೊಂಡನು. ಅವಳಲ್ಲಿ ಅವನಿಗೆ ಹಸ್ತಿ ಎಂಬ ಮಗನು ಜನಿಸಿದನು. ಅವನು ಈ ಪುರವನ್ನು ನಿರ್ಮಿಸಿದನು. ಆದ್ದರಿಂದ ಇದಕ್ಕೆ ಹಸ್ತಿನಪುರವೆಂದು ಹೆಸರು.

**ಹಸ್ತೀ ತು ಖಲು ತ್ರೈಗರ್ತೀಮುಪಯೇಮೇ ಯಶೋಧರಾಂ ನಾಮ ।
ತಸ್ಯಾಮಸ್ಯ ಜಜ್ಞೇ ವಿಕುಂಜನಃ ॥೨೯॥**

ಹಸ್ತಿಯು ತ್ರಿಗರ್ತದೇಶದ ಯಶೋಧರೆಯನ್ನು ವಿವಾಹ ಮಾಡಿಕೊಂಡನು. ಅವಳಲ್ಲಿ ಅವನಿಗೆ ವಿಕುಂಜನ ಎಂಬ ಮಗನು ಜನಿಸಿದನು.

**ವಿಕುಂಜನಸ್ತು ದಾಶಾರ್ಹೀಮುಪಯೇಮೇ ವಿಂದಾಂ ನಾಮ ।
ತಸ್ಯಾಮಸ್ಯ ಜಜ್ಞೇಽಜಮೀಢಃ ॥೩೦॥**

ವಿಕುಂಜನನು ದಾಶಾರ್ಹದೇಶದ ವಿಂದೆಯನ್ನು ವಿವಾಹ ಮಾಡಿಕೊಂಡನು. ಅವಳಲ್ಲಿ ಅವನಿಗೆ ಅಜಮೀಢನು ಜನಿಸಿದನು.

**ಅಜಮೀಢಸ್ಯ ತು ಚತುರ್ವಿಂಶತಿಪುತ್ರಶತಂ ಬಭೂವ ಕೈಕಯ್ಯಾಂ**
**ನಾಗಾಯಾಂ ಗಾಂಧಾರ್ಯಾಂ ವಿಮಲಾಯಾಮೃಕ್ಷಾಯಾಮಿತಿ ।**
**ಪೃಥಗ್ವಂಶಕರ್ತಾರೋ ನೃಪತಯಃ ॥೩೧॥**

ಅಜಮೀಢನಿಗೆ ಕೈಕೇಯೀ, ನಾಗಾ, ಗಾಂಧಾರೀ, ವಿಮಲಾ ಮತ್ತು ಋಕ್ಷಾ ಎಂಬ ಐದು ಪತ್ನಿಯರಲ್ಲಿ ಎರಡುಸಾವಿರದ ನಾಲ್ಕುನೂರು ಪುತ್ರರು ಜನಿಸಿದರು. ಅವರೆಲ್ಲರೂ ಬೇರೆ ಬೇರೆ ವಂಶಪ್ರವರ್ತಕರಾದ ರಾಜರಾದರು.

**ಅಜಮೀಢಾದೃಕ್ಷಾಯಾಂ ವಂಶಕರ್ತಾ ಸಂವರಣೋ ಜಜ್ಞೇ ॥೩೨॥**

ಅಜಮೀಢನಿಗೆ ಋಕ್ಷೆಯಲ್ಲಿ ವಂಶಕರ್ತನಾದ ಸಂವರಣನೆಂಬ ಪುತ್ರನು ಜನಿಸಿದನು.

**ಸಂವರಣಸ್ತು ಖಲು ವೈವಸ್ವತೀಂ ತಪತೀಂ ನಾಮೋಪಯೇಮೇ ।**
**ತಸ್ಯಾಮಸ್ಯ ಜಜ್ಞೇ ಕುರುಃ ॥೩೩॥**

ಸಂವರಣನು ವಿವಸ್ವಂತ (ಸೂರ್ಯ)ನ ಮಗಳಾದ ತಪತಿಯನ್ನು ಮದುವೆಯಾದನು. ಅಲ್ಲಿ ಅವನಿಗೆ ಕುರುವು ಜನಿಸಿದನು.

**ಕುರುಸ್ತು ದಾಶಾರ್ಹೀಮುಪಯೇಮೇ ಶುಭಾಂಗೀಂ ನಾಮ ।**
**ತಸ್ಯಾಮಸ್ಯ ಜಜ್ಞೇ ವಿಡೂರಥಃ ॥೩೪॥**

ಕುರುವು ದಾಶಾರ್ಹದೇಶದ ಶುಭಾಂಗಿಯನ್ನು ಮದುವೆಯಾದನು. ಅವಳಲ್ಲಿ ಅವನಿಗೆ ವಿಡೂರಥನು ಜನಿಸಿದನು.

**ವಿಡೂರಥಸ್ತು ಖಲು ಮಾಗಧೀಮುಪಯೇಮೇ ಸಂಪ್ರಿಯಾಂ**
**ನಾಮ । ತಸ್ಯಾಮಸ್ಯ ಜಜ್ಞೇಽನಶ್ವಾನ್ ॥೩೫॥**

ವಿಡೂರಥನು ಮಗಧದೇಶದ ಸಂಪ್ರಿಯೆಯನ್ನು ಮದುವೆಯಾದನು. ಅವಳಲ್ಲಿ ಅವನಿಗೆ ಅನಶ್ವಾನ್ ಎಂಬ ಮಗನು ಜನಿಸಿದನು.

**ಅನಶ್ವಾಂಸ್ತು ಮಾಗಧೀಮುಪಯೇಮೇ ಸುವೇಷಾಂ ನಾಮ ।**
**ತಸ್ಯಾಮಸ್ಯ ಜಜ್ಞೇ ಪರೀಕ್ಷಿತ್ ॥೩೬॥**

ಅನಶ್ವಂತನು ಮಗಧದೇಶದ ಸುವೇಷೆಯನ್ನು ಮದುವೆಯಾದನು. ಅವಳಲ್ಲಿ ಅವನಿಗೆ ಪರೀಕ್ಷಿತನು ಹುಟ್ಟಿದನು.

ಪರೀಕ್ಷಿತ್ತು ಬಾಹುಕಾಮುಪಯೇಮೇಽಮೃತಾಂ ನಾಮ ।
ತಸ್ಯಾಮಸ್ಯ ಜಜ್ಞೇ ಭೀಮಸೇನಃ ॥೩೭॥

ಪರೀಕ್ಷಿತನು ಬಾಹುಕದೇಶದ ಅಮೃತೆಯನ್ನು ಮದುವೆಯಾದನು. ಅವಳಲ್ಲಿ ಅವನಿಗೆ ಭೀಮಸೇನನು ಜನಿಸಿದನು.

ಭೀಮಸೇನಸ್ತು ಖಲು ಕೈಕಯೀಮುಪಯೇಮೇ ಸುಕುಮಾರೀಂ
ನಾಮ । ತಸ್ಯಾಮಸ್ಯ ಜಜ್ಞೇ ಪರ್ಯಶ್ರವಾಃ ।
ಯಮಾಹುಃ ಪ್ರತೀಪ ಇತಿ ॥೩೮॥

ಭೀಮಸೇನನು ಕೇಕಯದೇಶದ ಸುಕುಮಾರಿಯನ್ನು ಮದುವೆಯಾದನು. ಅವಳಲ್ಲಿ ಅವನಿಗೆ ಪರ್ಯಶ್ರವ ಎಂಬ ಮಗನು ಜನಿಸಿದನು. ಪರ್ಯಶ್ರವನಿಗೆ ಪ್ರತೀಪ ಎಂದೂ ಹೆಸರು.

ಪ್ರತೀಪಸ್ತು ಶೈಬ್ಯಾಮುಪಯೇಮೇ ಸುನಂದಾಂ ನಾಮ ।
ತಸ್ಯಾಂ ತ್ರೀನ್ ಪುತ್ರಾನುತ್ಪಾದಯಾಮಾಸ
ದೇವಾಪಿಂ ಶಂತನುಂ ಬಾಹ್ಲೀಕಂ ಚೇತಿ ॥೩೯॥

ಪ್ರತೀಪನು ಶೈಬ್ಯರಾಜಕುಮಾರಿಯಾದ ಸುನಂದೆಯನ್ನು ಮದುವೆಯಾದನು. ಅವಳಲ್ಲಿ ಅವನು ದೇವಾಪಿ, ಶಂತನು ಮತ್ತು ಬಾಹ್ಲೀಕ ಎಂಬ ಮೂರು ಮಕ್ಕಳನ್ನು ಪಡೆದನು.

ದೇವಾಪಿಸ್ತು ಖಲು ಬಾಲ ಏವಾರಣ್ಯಂ ಪ್ರವಿವೇಶ ।
ಶಂತನುಸ್ತು ಮಹೀಪಾಲೋಽಭವತ್ ॥೪೦॥

ದೇವಾಪಿಯು ಬಾಲ್ಯದಲ್ಲಿಯೇ ಅರಣ್ಯಕ್ಕೆ ಹೋದನು. ಶಂತನುವು ರಾಜನಾದನು.

ತತ್ರ ಶ್ಲೋಕೋ ಭವತಿ -

ಯಂ ಯಂ ಕರಾಭ್ಯಾಂ ಸ್ಪೃಶತಿ ಜೀರ್ಣಂ ಸ ಸುಖಮಶ್ನುತೇ ।
ಪುನರ್ಯುವಾಽಽಭ್ಯಾಂ ಭವತಿ ತಸ್ಮಾತ್ ತಂ ಶಂತನುಂ ವಿದುಃ ॥೪೧॥

ಅವನ ವಿಷಯದಲ್ಲಿ ಈ ಶ್ಲೋಕವಿದೆ -

ಮುಪ್ಪಿನಲ್ಲಿದ್ದ ಯಾರು ಯಾರನ್ನು ತನ್ನ ಕೈಗಳಿಂದ ಮುಟ್ಟುತ್ತಾನೋ ಅವರು ವೃದ್ಧಾಪ್ಯದ ದೋಷವನ್ನು ಕಳೆದುಕೊಂಡು ಸುಖವನ್ನು ಹೊಂದುತ್ತಾರೆ. ಆ ಸ್ಪರ್ಶ ಮಾಡುವ ಎರಡು ಕೈಗಳ ಮಹಿಮೆಯಿಂದ (ಮುದುಕನು) ಪುನಃ ಯುವಕನಾಗುತ್ತಾನೆ. ಆದ್ದರಿಂದ ಅವನಿಗೆ ಶಂತನು ಎನ್ನುತ್ತಾರೆ.

ತತ್ತಸ್ಯ ಶಂತನುತ್ವಮ್ ॥

ಇದೇ ಅವನಿಗೆ ಶಂತನು ಎಂದು ಹೆಸರು ಬರಲು ಕಾರಣ.

ಶಂತನುಸ್ತು ಖಲು ಗಂಗಾಂ ಭಾಗೀರಥೀಮುಪಯೇಮೇ । ತಸ್ಯಾಮಸ್ಯ
ಜಜ್ಞೇ ದೇವವ್ರತೋ ನಾಮ ಯಮಾಹುರ್ಭೀಷ್ಮ ಇತಿ ॥೪೨॥

ಶಂತನುವು ಭಗೀರಥನ ಮಗಳಾದ ಗಂಗೆಯನ್ನು ವಿವಾಹಮಾಡಿಕೊಂಡನು. ಅವಳಲ್ಲಿ ಅವನಿಗೆ ದೇವವ್ರತನೆಂಬ ಮಗನು ಜನಿಸಿದನು. ಇವನನ್ನೇ ಭೀಷ್ಮ ಎಂದೂ ಕರೆಯುತ್ತಾರೆ.

ಭೀಷ್ಮಸ್ತು ಪಿತುಃ ಪ್ರೀತಿಚಿಕೀರ್ಷಯಾ ಸತ್ಯವತೀಮಾನಯಾಮಾಸ
ಮಾತರಮ್ । ಯಾಮಾಹುಃ ಕಾಳೀತಿ ॥೪೩॥

ಭೀಷ್ಮನು ತಂದೆಗೆ ಹಿತವನ್ನು ಮಾಡಲು (ದಾಶರಾಜನ ಮಗಳಾದ) ಸತ್ಯವತಿಯನ್ನು (ತನ್ನ) ತಾಯಿಯಾಗಿ ಕರೆತಂದನು. ಅವಳಿಗೆ ಕಾಳಿ ಎಂದೂ ಹೆಸರು.

ತಸ್ಯಾಂ ಪೂರ್ವಂ ಪರಾಶರಾತ್ ಕನ್ಯಾಗರ್ಭೋ ದ್ವೈಪಾಯನಃ ।
ತಸ್ಯಾಮೇವ ಶಂತನೋರ್ದ್ವೌ ಪುತ್ರೌ ಬಭೂವತುಃ
ಚಿತ್ರಾಂಗದೋ ವಿಚಿತ್ರವೀರ್ಯಶ್ಚೇತಿ ॥೪೪॥

ಸತ್ಯವತಿಯಲ್ಲಿ ಇದಕ್ಕೆ ಮೊದಲು ಕನ್ಯಾವಸ್ಥೆಯಲ್ಲಿಯೇ ಪರಾಶರರಿಂದ ವ್ಯಾಸರು ಜನಿಸಿದ್ದರು. ಅವಳಲ್ಲಿಯೇ (ಅನಂತರ) ಶಂತನುವು ಚಿತ್ರಾಂಗದ ಮತ್ತು ವಿಚಿತ್ರವೀರ್ಯ ಎಂಬ ಎರಡು ಮಕ್ಕಳನ್ನು ಪಡೆದನು.

ಚಿತ್ರಾಂಗದಸ್ತ್ವಪ್ರಾಪ್ತಯೌವನ ಏವ ಗಂಧರ್ವೇಣ ನಿಹತಃ ।
ತತೋ ವಿಚಿತ್ರವೀರ್ಯೋ ರಾಜಾ ಬಭೂವ ॥೪೫॥

ಚಿತ್ರಾಂಗದನು ಯೌವನಾವಸ್ಥೆಗೆ ಬರುವುದಕ್ಕೆ ಮೊದಲೇ ಗಂಧರ್ವನಿಂದ ಹತನಾದನು. ಆದ್ದರಿಂದ ವಿಚಿತ್ರವೀರ್ಯನು ರಾಜನಾದನು.

ವಿಚಿತ್ರವೀರ್ಯಸ್ತು ಖಲು ಕಾಶಿರಾಜಸ್ಯ ಸುತೇ
ಅಂಬಿಕಾಂಬಾಲಿಕೇ ಉದವಹತ್ ।
ಸ ವಿಚಿತ್ರವೀರ್ಯೋಽನುತ್ಪನ್ನಾಪತ್ಯ ಏವ ವಿದೇಹತ್ವಂ ಪ್ರಾಪ್ತಃ ॥೪೬॥

ವಿಚಿತ್ರವೀರ್ಯನು ಕಾಶಿರಾಜನ ಮಕ್ಕಳಾದ ಅಂಬಿಕೆ ಮತ್ತು ಅಂಬಾಲಿಕೆ ಎಂಬ ಇಬ್ಬರನ್ನು ಮದುವೆಯಾದನು. ಆದರೆ ಅವರಲ್ಲಿ ಮಕ್ಕಳನ್ನು ಪಡೆಯುವುದಕ್ಕಿಂತ ಮೊದಲೇ ಮೃತನಾದನು.

ತತೋ ಸತ್ಯವತೀ ಚಿಂತಯಾಮಾಸ । ಕಥಂ ನು ಖಲು ಶಂತನೋಃ
ಪಿಂಡವಿಚ್ಛೇದೋ ನ ಸ್ಯಾದಿತಿ ॥೪೭॥

ಆಗ ಸತ್ಯವತಿಯು ಶಂತನುವಿನ ವಂಶವು ವಿಚ್ಛೇದ ಹೊಂದದಿರುವುದಕ್ಕೆ ಏನು ಮಾಡಬೇಕೆಂದು ಚಿಂತಿಸಿದಳು.

ಸಾಽಥ ದ್ವೈಪಾಯನಂ ಚಿಂತಯಾಮಾಸ ಸೋಽಗ್ರತಃ ಸ್ಥಿತಃ ಕಿಂ
ಕರವಾಣೀತಿ ಮಾತರಿ । ತಂ ಸತ್ಯವತ್ಯುವಾಚ ಭ್ರಾತಾ
ತೇಽನಪತ್ಯ ಏವ ಸ್ವರ್ಗತಃ ತಸ್ಯಾರ್ಥೇಽಪತ್ಯಮುತ್ಪಾದಯೇತಿ ॥೪೮॥

ಆಗ ಅವಳು ವೇದವ್ಯಾಸರನ್ನು ಸ್ಮರಿಸಿದಳು. ವ್ಯಾಸರು ಎದುರಿಗೆ ಬಂದು ನಿಂತು ಏನು ಮಾಡಲಿ ಎಂದು ತಾಯಿಯನ್ನು ಕೇಳಿದರು. ಆಗ ಸತ್ಯವತಿಯು ನಿನ್ನ ತಮ್ಮನು ಮಕ್ಕಳನ್ನು ಪಡೆಯದೇ ಸ್ವರ್ಗಸ್ಥನಾಗಿದ್ದಾನೆ. ಅವನ ಸಲುವಾಗಿ ಮಕ್ಕಳನ್ನು ಪಡೆ ಎಂದು ಹೇಳಿದಳು.

ಸ ಪರಮಿತ್ಯುವಾಚ ಸ ತತ್ರ ತ್ರೀನ್ ಪುತ್ರಾನುತ್ಪಾದಯಾಮಾಸ ।
ಧೃತರಾಷ್ಟ್ರಂ ಪಾಂಡುಂ ವಿದುರಂ ಚೇತಿ ॥೪೯॥

ವ್ಯಾಸರು ಹಾಗೆಯೇ ಆಗಲಿ ಎಂದು ಹೇಳಿ ಧೃತರಾಷ್ಟ್ರ, ಪಾಂಡು ಮತ್ತು ವಿದುರ ಎಂಬ ಮೂರು ಮಕ್ಕಳನ್ನು ಪಡೆದರು.

ಧೃತರಾಷ್ಟ್ರಸ್ಯ ರಾಜ್ಞಃ ಪುತ್ರಾಣಾಂ ಶತಂ ಬಭೂವ ಗಾಂಧರ್ಯಾಂ
ವರದಾನಾತ್ ತೇಷಾಂ ಚ ಧಾರ್ತರಾಷ್ಟ್ರಾಣಾಂ ಚತ್ವಾರಃ ಪ್ರಧಾನಾಃ
ದುರ್ಯೋಧನೋ ದುಶ್ಶಾಸನೋ ವಿಕರ್ಣಶ್ಚಿತ್ರಸೇನಶ್ಚ ಇತಿ ॥೫೦॥

ಧೃತರಾಷ್ಟ್ರರಾಜನ ಪತ್ನಿಯಾದ ಗಾಂಧಾರಿಗೆ ವರಬಲದಿಂದ ನೂರು ಪುತ್ರರು ಜನಿಸಿದರು. ಅವರಲ್ಲಿ ದುರ್ಯೋಧನ, ದುಶ್ಶಾಸನ, ವಿಕರ್ಣ ಮತ್ತು ಚಿತ್ರಸೇನ ಎಂಬುವರು ಪ್ರಧಾನರು.

ಪಾಂಡೋಸ್ತು ಕುಂತೀ ಮಾದ್ರೀತಿ ಸ್ತ್ರೀರತ್ನೇ ಬಭೂವತುಃ ।
ಸ ಮೃಗಯಾಂ ಚರನ್ ಮೈಥುನಗತಮೃಷಿಂ
ಮೃಗಚಾರಿಣಂ ಬಾಣೇನಾಜಘಾನ ॥೫೧॥

ಪಾಂಡುವಿಗೆ ಕುಂತಿ ಮತ್ತು ಮಾದ್ರಿ ಎಂಬ ರತ್ನಪ್ರಾಯಸ್ತ್ರೀಯರಾಗಿದ್ದ ಇಬ್ಬರು ಪತ್ನಿಯರಾಗಿದ್ದರು. ಪಾಂಡುವು ಬೇಟೆಯಾಡುತ್ತಾ ಮೃಗವೇಷದಲ್ಲಿ ಮೈಥುನನಿರತರಾಗಿದ್ದ ಒಬ್ಬ ಋಷಿಯನ್ನು ಬಾಣದಿಂದ ಹೊಡದನು.

ಸ ಬಾಣವಿದ್ಧ ಉವಾಚ ಪಾಂಡುಮ್ ।

ಅತ್ರ ಶ್ಲೋಕೋ ಭವತಿ -

ಯೋಽಕೃತಾರ್ಥಂ ಹಿ ಮಾಂ ಕ್ರೂರ ಬಾಣೇನಾಘ್ನಾ ಮೃಗವ್ರತಮ್ ।
ತ್ವಾಮಪ್ಯೇತಾದೃಶೋ ಭಾವಃ ಕ್ಷಿಪ್ರಮೇವ ಗಮಿಷ್ಯತಿ ಇತಿ
ಮೃಗವ್ರತಚಾರಿಣಾ ಋಷಿಣಾ ಶಪ್ತಃ ॥೫೨॥

ಬಾಣದ ಏಟನ್ನು ತಿಂದ ಋಷಿಯು ಪಾಂಡುವನ್ನು ಕುರಿತು ಹೇಳಿದನು.

ಈ ವಿಷಯದಲ್ಲಿ ಹೀಗೆ ಶ್ಲೋಕವಿದೆ -

ಎಲೈ ಕ್ರೂರನೇ, ಮೃಗವ್ರತವನ್ನು ಧರಿಸಿದ (ಮೃಗರೂಪದಿಂದ) ಕಾಮದಲ್ಲಿ ತೃಪ್ತಿಯನ್ನು ಪಡೆಯದ ನನ್ನನ್ನು ಹೀಗೆ ನೀನು ಬಾಣದಿಂದ (ಹೊಡೆದು) ಕೊಲ್ಲುತ್ತಿರುವುದರಿಂದ ಕ್ಷಿಪ್ರದಲ್ಲಿಯೇ ನಿನಗೂ ಇಂತಹ ಅವಸ್ಥೆಯೇ ಪ್ರಾಪ್ತವಾಗಲಿ. ಹೀಗೆ ಪಾಂಡುವು ಮೃಗವ್ರತಧಾರಿಯಾದ ಋಷಿಯಿಂದ ಶಪಿಸಲ್ಪಟ್ಟನು.

ಸ ವಿಷಣ್ಣರೂಪಃ ಪಾಂಡುಸ್ತಂ ಶಾಪಂ ಪರಿಹರನ್
ನೋಪಸರ್ಪತಿ ಭಾರ್ಯೇ ॥೫೩॥

ಪಾಂಡುವು ವಿಷಣ್ಣನಾಗಿ ಶಾಪದಿಂದ ಬರಲಿರುವ ಮರಣಾವಸ್ಥೆಯನ್ನು ಪರಿಹರಿಸಿಕೊಳ್ಳುವ ಉದ್ದೇಶದಿಂದ ತನ್ನ ಪತ್ನಿಯರ ಸಮೀಪಕ್ಕೆ ಹೋಗುತ್ತಿರಲಿಲ್ಲ.

ಆಹ ಚ । ಸ್ವಚಾಪಲ್ಯಾದಿದಂ ಪ್ರಾಪ್ತವಾನಹಮ್ ।
ಶೃಣೋಮಿ ನಾನಪತ್ಯಸ್ಯ ಲೋಕಾಃ ಸಂತೀತಿ ।
ಮಮಾರ್ಥೇ ಪುತ್ರಾನುತ್ಪಾದಯೇತಿ ಕುಂತೀಮುವಾಚ ॥೫೪॥

ಹೀಗೆ ಹೇಳಿದನೂ ಕೂಡ. ನನ್ನ ಚಾಪಲ್ಯದೋಷದಿಂದಲೇ ನಾನು ಈ ಶಾಪವನ್ನು ಪಡೆದಿದ್ದೇನೆ. ಮಕ್ಕಳಿಲ್ಲದವರಿಗೆ ಸದ್ಗತಿಯಿಲ್ಲವೆಂದು ಕೇಳಿದ್ದೇನೆ. ಆದ್ದರಿಂದ ನನ್ನ ಸಲುವಾಗಿ ಮಕ್ಕಳನ್ನು ಪಡೆ ಎಂದು ಕುಂತಿಗೆ ಹೇಳಿದನು.

ಸಾ ಪುತ್ರಾನುತ್ಪಾದಯಾಮಾಸ ಧರ್ಮಾದ್
ಯುಧಿಷ್ಠಿರಂ ಮಾರುತಾದ್ ಭೀಮಸೇನಮಿಂದ್ರಾದರ್ಜುನಮಿತಿ ॥೫೫॥

ಅವಳು ಯಮನಿಂದ ಯುಧಿಷ್ಠಿರನನ್ನೂ, ವಾಯುದೇವನಿಂದ ಭೀಮಸೇನನನ್ನೂ, ದೇವೇಂದ್ರನಿಂದ ಅರ್ಜುನನನ್ನೂ - ಹೀಗೆ ಮೂರು ಮಕ್ಕಳನ್ನು ಪಡೆದಳು.

ಪ್ರಹೃಷ್ಟರೂಪಃ ಪಾಂಡುರುವಾಚೈವಮ್ ಇಯಂ ತೇ ಮಾದ್ರೀಸಪತ್ನೀ
ಹ್ಯನಪತ್ಯಾ ವ್ರೀಡಿತಾ ಸಾಧ್ವೀ ಚೈವಮಸ್ಯಾಮಪತ್ಯಮುತ್ಪಾದ್ಯತಾಮಿತಿ
ಸಾ ತಥೇತಿ ತಸ್ಯೈ ವ್ರತಮಾದಿದೇಶ ॥೫೬॥

ಪಾಂಡುವು ಹರ್ಷಿತನಾಗಿ (ಕುಂತಿಯನ್ನು ಕುರಿತು) ನಿನ್ನ ಸಪತ್ನಿಯಾದ ಸಾಧ್ವಿಯಾದ ಮಾದ್ರಿಯು ಮಕ್ಕಳಿಲ್ಲದೆ ನಾಚಿಕೆಯಿಂದಿದ್ದಾಳೆ. ಆದ್ದರಿಂದ ಅವಳಲ್ಲಿಯೂ ನಿನ್ನಂತೆಯೇ ಮಕ್ಕಳನ್ನು ಪಡೆ ಎಂದು ಹೇಳಿದನು. ಕುಂತಿಯು ಹಾಗೆಯೇ ಆಗಲಿ ಎಂದು ಹೇಳಿ ಮಾದ್ರಿಗೆ ವ್ರತವನ್ನು ಉಪದೇಶಮಾಡಿದಳು.

ತಸ್ಯಾಂ ನಕುಲಸಹದೇವೌ ಯಮಾವಶ್ವಿಭ್ಯಾಂ ಜಜ್ಞಾತೇ ॥೫೭॥

ಮಾದ್ರಿಯಲ್ಲಿ ಆಶ್ವಿನೀದೇವತೆಗಳಿಂದ ನಕುಲಸಹದೇವರು ಅವಳಿ ಮಕ್ಕಳಾಗಿ ಜನಿಸಿದರು.

**ಮಾದ್ರೀಂ ತು ಸ್ವಲಂಕೃತಾಂ ದೃಷ್ಟ್ವಾ ಪಾಂಡುರ್ಭಾವಂ ಚಕ್ರೇ ।**
**ಸ ತಾಂ ಪ್ರಾಪ್ಯೈವ ವಿದೇಹತ್ವಂ ಪ್ರಾಪ್ತಃ ॥೬೦॥**

ಒಮ್ಮೆ ಅಲಂಕೃತಳಾದ ಮಾದ್ರಿಯನ್ನು ನೋಡಿ ಪಾಂಡುವು ಕಾಮವಶನಾದನು. ಅವನು ಅವಳನ್ನು ಸೇರಿ ಸ್ವರ್ಗಸ್ಥನಾದನು.

**ತತ್ರೈನಂ ಚಿತಾಯಾಮನ್ವಾರುರೋಹ ಮಾದ್ರೀ । ಕುಂತೀಂ ಚೋವಾಚ**
**ಯಮಯೋರಾರ್ಯಯಾಽಪ್ರಮತ್ತಯಾ ಭವಿತವ್ಯಮಿತಿ ॥೬೧॥**

ಮಾದ್ರಿಯು ಚಿತೆಯಲ್ಲಿ ಅವನ ಜೊತೆ ಸಹಗಮನವನ್ನು ಮಾಡಿದಳು. (ಅದಕ್ಕಿಂತ ಮೊದಲು) ಕುಂತಿಗೆ ತನ್ನ ಅವಳಿ ಮಕ್ಕಳನ್ನು ಎಚ್ಚರದಿಂದ ನೋಡಿಕೊಳ್ಳಬೇಕೆಂದು ಹೇಳಿದಳು.

**ತತಃ ಪಂಚ ಪಾಂಡವಾನ್ ಕುಂತ್ಯಾ ಸಹ ಹಸ್ತಿನಪುರಂ**
**ನಯಂತಿ ಸ್ಮ ಸುತಪಸ್ವಿನಃ ॥೬೨॥**

ಅನಂತರ ಪಾಂಡುವಿನ ಐದು ಮಕ್ಕಳನ್ನೂ ಋಷಿಗಳು ಹಸ್ತಿನಪುರಕ್ಕೆ ಕರೆತಂದರು.

**ತತ್ರ ಭೀಷ್ಮಾಯ ಧೃತರಾಷ್ಟ್ರವಿದುರಯೋಃ ಸ್ವರ್ಗಗಮನಂ**
**ಯಾಥಾತಥ್ಯಂ ನಿವೇದಯಂತಿ ಸ್ಮ ತಪಸ್ವಿನಃ ॥೬೩॥**

ಅಲ್ಲಿ ತಪಸ್ವಿಗಳು (ಋಷಿಗಳು) ಭೀಷ್ಮ, ಧೃತರಾಷ್ಟ್ರ ಮತ್ತು ವಿದುರರನ್ನು ಕುರಿತು ಪಾಂಡುವಿನ ಸ್ವರ್ಗಗಮನ ವೃತ್ತಾಂತವನ್ನು ಯಥಾವತ್ತಾಗಿ ತಿಳಿಸಿದರು.

**ಪಾಂಡವಾನ್ ಸಹ ಕುಂತ್ಯಾ ಜತುಗೃಹೇ**
**ದಾಹಯಿತುಕಾಮೋ ಧೃತರಾಷ್ಟ್ರಾತ್ಮಜೋಽಭೂತ್ ॥೬೪॥**

ಧೃತರಾಷ್ಟ್ರನ ಮಗನಾದ ದುರ್ಯೋಧನನು ಪಾಂಡವರನ್ನು ಅರಗಿನ ಮನೆಯಲ್ಲಿ ಕುಂತಿಯ ಜೊತೆಯಲ್ಲಿ ಸುಡಲು ಬಯಸಿದನು.

**ತಾಂಶ್ಚ ವಿದುರೋ ಮೋಕ್ಷಯಿತ್ವಾ ಪ್ರೀತೋಽಭವತ್ ॥೬೫॥**

ವಿದುರನು ಅವರನ್ನು ಪಾರುಮಾಡಿ ಸಂತುಷ್ಟನಾದನು.

**ತತೋ ಹಿಡಿಂಬಂ ಹತ್ವಾ ಪುತ್ರಮುತ್ಪಾದಯಾಮಾಸ ಭೀಮಃ ।**
**ತತ ಏಕಚಕ್ರಾಂ ಜಗ್ಮುಃ ಕುಶಲಿನಃ ॥೬೬॥**

ಅನಂತರ ಹಿಡಿಂಬನನ್ನು ಕೊಂದು ಭೀಮಸೇನನು (ಹಿಡಿಂಬೆಯಲ್ಲಿ) ಘಟೋತ್ಕಚನೆಂಬ ಮಗನನ್ನು ಪಡೆದನು. ಅಲ್ಲಿಂದ ಪಾಂಡವರು ಕ್ಷೇಮದಿಂದ ಏಕಚಕ್ರನಗರಕ್ಕೆ ಬಂದರು.

**ಪಾಂಚಾಲವಿಷಯಂ ಗತ್ವಾ ಸ್ವಯಂವರೇ ದ್ರೌಪದೀಂ**
**ಲಬ್ಧ್ವಾಽರ್ಧರಾಜ್ಯಂ ಪ್ರಾಪ್ಯೇಂದ್ರಪ್ರಸ್ಥನಿವಾಸಿನಸ್ತಸ್ಯಾಂ**
**ಪುತ್ರಾನುತ್ಪಾದಯಾಮಾಸುರ್ದ್ರೌಪದ್ಯಾಂ ಪ್ರತಿವಿಂಧ್ಯಂ**
**ಯುಧಿಷ್ಠಿರಃ ಸುತಸೋಮಂ ವೃಕೋದರಃ ಶ್ರುತಕೀರ್ತಿಮರ್ಜುನಃ ।**
**ಶತಾನೀಕಂ ನಕುಲಃ । ಶ್ರುತಕರ್ಮಾಣಂ ಸಹದೇವ ಇತಿ ॥೬೭॥**

ಪಾಂಡವರು ಪಾಂಚಾಲದೇಶಕ್ಕೆ ಹೋಗಿ ಸ್ವಯಂವರದಲ್ಲಿ ದ್ರೌಪದಿಯನ್ನು ಪಡೆದು (ಹಸ್ತಿನಪುರಕ್ಕೆ ಹಿಂದಿರುಗಿ) ಅರ್ಧರಾಜ್ಯವನ್ನು ಪಡೆದು ಇಂದ್ರಪ್ರಸ್ಥನಿವಾಸಿಗಳಾದರು. ದ್ರೌಪದಿಯಲ್ಲಿ ಎಲ್ಲರೂ ಮಕ್ಕಳನ್ನು ಪಡೆದರು. ಯುಧಿಷ್ಠಿರನ ಮಗ ಪ್ರತಿವಿಂಧ್ಯ, ಭೀಮಸೇನನ ಮಗ ಸುತಸೋಮ, ಅರ್ಜುನನ ಮಗ ಶ್ರುತಕೀರ್ತಿ, ನಕುಲನ ಮಗ ಶತಾನೀಕ ಮತ್ತು ಸಹದೇವನ ಮಗ ಶ್ರುತಕರ್ಮ.

**ಶೈಬ್ಯಸ್ಯ ಕನ್ಯಾಂ ದೇವಕೀಂ ನಾಮೋಪಯೇಮೇ ಯುಧಿಷ್ಠಿರಃ । ತಸ್ಯಾಂ**
**ಪುತ್ರಂ ಜನಯಾಮಾಸ ಯುಧಿಷ್ಠಿರೋ ಯೌಧೇಯಂ ನಾಮ ॥೬೮॥**

ಯುಧಿಷ್ಠಿರನು ಶೈಬ್ಯದೇಶದ ಕನ್ಯೆಯಾದ ದೇವಕಿಯನ್ನು ಮದುವೆಮಾಡಿಕೊಂಡು ಅವಳಲ್ಲಿ ಯೌಧೇಯನೆಂಬ ಮಗನನ್ನು ಪಡೆದನು.

**ಭೀಮಸೇನಸ್ತು ಖಲು ವಾರಾಣಸ್ಯಾಂ ಕಾಶಿರಾಜಕನ್ಯಾಂ ಬಲಧಾರೀಂ**
**ನಾಮೋದವಹತ್ ಸ್ವಯಂವರಸ್ಥಾಮ್ । ತಸ್ಯಾಮಸ್ಯ ಜಜ್ಞೇ ಶರ್ವತ್ರಾತಃ ॥**

ಭೀಮಸೇನನಾದರೋ ಕಾಶಿರಾಜನ ಮಗಳಾದ ಬಲಧಾರಿಯನ್ನು ಸ್ವಯಂವರದಲ್ಲಿ ವಿವಾಹವಾದನು. ಅವಳಲ್ಲಿ ಅವನಿಗೆ ಶರ್ವತ್ರಾತನೆಂಬ ಮಗನು ಜನಿಸಿದನು.

**ಭೀಮಸೇನಸ್ತು ಪೂರ್ವಮೇವ ಹಿಡಿಂಬಾಯಾಂ ರಾಕ್ಷಸ್ಯಾಂ**
**ಜನಯಾಮಾಸ ಘಟೋತ್ಕಚಂ ನಾಮ ॥೭೦॥**

ಇದಕ್ಕೆ ಮೊದಲೇ ಭೀಮಸೇನನು ರಾಕ್ಷಸಿಯಾದ ಹಿಡಿಂಬೆಯಲ್ಲಿ ಘಟೋತ್ಕಚನೆಂಬ ಮಗನನ್ನು ಪಡೆದಿದ್ದನು.

ಅರ್ಜುನಸ್ತು ಖಲು ದ್ವಾರವತೀಂ ಗತ್ವಾ ಭಗವತೋ
ವಾಸುದೇವಸ್ಯ ಭಗಿನೀಂ ಸುಭದ್ರಾಂ ನಾಮೋದವಹತ್ ।
ತಸ್ಯಾಮಭಿಮನ್ಯುಂ ನಾಮ ಪುತ್ರಂ ಜನಯಾಮಾಸ ॥೭೧॥

ಅರ್ಜುನನು ದ್ವಾರಾವತಿಗೆ ಹೋಗಿ ಭಗವಂತನಾದ ಕೃಷ್ಣನ ತಂಗಿಯಾದ ಸುಭದ್ರೆಯನ್ನು ವಿವಾಹವಾದನು. ಅವಳಲ್ಲಿ ಅಭಿಮನ್ಯುವೆಂಬ ಮಗನನ್ನು ಪಡೆದನು.

ಅರ್ಜುನಶ್ಚ ನಾಗಕನ್ಯಾಯಾಮುಲೂಪ್ಯಾಮಿರಾವಂತಂ
ನಾಮ ಪುತ್ರಂ ಜನಯಾಮಾಸ ॥೭೨॥

ಅರ್ಜುನನು ನಾಗಕನ್ಯೆಯಾದ ಉಲೂಪಿಯಲ್ಲಿ ಇರಾವಂತನೆಂಬ ಮಗನನ್ನು ಪಡೆದನು.

ತತೋ ಮಣಲೂರುಪತಿಕನ್ಯಾಯಾಂ ಚಿತ್ರಾಂಗದಾಯಾಮರ್ಜುನಃ
ಪುತ್ರಮುತ್ಪಾದಯಾಮಾಸ ಬಭ್ರುವಾಹನಂ ನಾಮ ॥೭೩॥

ಅನಂತರ ಅರ್ಜುನನು ಮಣಲೂರುರಾಜಕುಮಾರಿಯಾದ ಚಿತ್ರಾಂಗದೆಯನ್ನು ಮದುವೆಯಾಗಿ ಅವಳಲ್ಲಿ ಬಭ್ರುವಾಹನನೆಂಬ ಮಗನನ್ನು ಪಡೆದನು.

ನಕುಲಸ್ತು ಖಲು ಚೈದ್ಯಾಂ ರೇಣುಮತೀಂ ನಾಮೋಪಯೇಮೇ ।
ತಸ್ಯಾಂ ಪುತ್ರಂ ಜನಯಾಮಾಸ ನಿರಮಿತ್ರಂ ನಾಮ ॥೭೪॥

ನಕುಲನು ಚೇದಿದೇಶದ ರೇಣುಮತಿಯನ್ನು ವಿವಾಹಮಾಡಿಕೊಂಡನು. ಅವಳಲ್ಲಿ ನಿರಮಿತ್ರ ಎಂಬ ಪುತ್ರನನ್ನು ಪಡೆದನು.

ಸಹದೇವಸ್ತು ಖಲು ಮಾದ್ರೀಮೇವ ಸ್ವಯಂವರೇ ವಿಜಯಾಂ
ನಾಮೋದವಹದ್ ಭಾರ್ಯಾಮ್ । ತಸ್ಯಾಂ ಪುತ್ರಂ ಜನಯಾಮಾಸ
ಸುಹೋತ್ರಂ ನಾಮ ॥೭೫॥

ಸಹದೇವನಾದರೋ ಮದ್ರದೇಶದ ರಾಜಕುಮಾರಿಯಾದ ವಿಜಯಾ ಎಂಬುವಳನ್ನು ಪತ್ನಿಯಾಗಿ ಪಡೆದು ಅವಳಲ್ಲಿ ಸುಹೋತ್ರನೆಂಬ ಮಗನನ್ನು ಪಡೆದನು.

ಏತೇ ತ್ರಯೋದಶ ಪುತ್ರಾಃ ಪಾಂಡವಾನಾಮ್ ॥೭೬॥

ಪಾಂಡವರ ಮಕ್ಕಳು ಈ ಹದಿಮೂರು ಜನರು.

ವಿರಾಟಸ್ಯ ದುಹಿತರಮುತ್ತರಾಂ ನಾಮಾಭಿಮನ್ಯುರುಪಯೇಮೇ ।
ತಸ್ಯಾಮಸ್ಯ ಪರಾಸುರ್ಗರ್ಭೋऽಜಾಯತ ॥೭೭॥

ಅಭಿಮನ್ಯುವು ವಿರಾಟನ ಮಗಳಾದ ಉತ್ತರೆಯನ್ನು ಮದುವೆಮಾಡಿಕೊಂಡನು. ಅವಳಲ್ಲಿ ಅವನಿಗೆ ಮೃತವಾದ ಶಿಶುವು ಜನಿಸಿತು.

ತಮುತ್ಸಂಗೇ ಪ್ರತಿಜಗ್ರಾಹ ಪೃಥಿವೀ ನಿಯೋಗಾತ್ ಪುರುಷೋತ್ತಮಸ್ಯ ॥

ಭೂಮಿಯ ಅಪ್ಪಣೆಯಂತೆ (ಉತ್ತರೆಯು) ಆ ಶಿಶುವನ್ನು ಪುರುಷೋತ್ತಮನಾದ ಕೃಷ್ಣನ ತೊಡೆಯ ಮೇಲೆ ಇಟ್ಟಳು.

ಸುಭದ್ರಾಯಾಃ ಷಾಣ್ಮಾಸಿಕಂ ಗರ್ಭಮಿಮಂ ಜೀವಯಾಮಿ
ಪಾದಸ್ಪರ್ಶಾದಿತಿ ವಾಸುದೇವ ಉವಾಚ ॥೭೮॥

ಆರುತಿಂಗಳಿಗೆ ಜನಿಸಿದ ಸುಭದ್ರೆಯ ಈ ಗರ್ಭವನ್ನು ಪಾದಸ್ಪರ್ಶದಿಂದ ಬದುಕಿಸುತ್ತೇನೆಂದು ಕೃಷ್ಣನು ಹೇಳಿದನು.

ಅಹಂ ಜೀವಯಾಮಿ ಕುಮಾರಮನಂತವೀರ್ಯಂ ಜಾತ
ಏವಾಯಮಜಾಯತ । ಅಭಿಮನ್ಯೋಃ ಸತ್ಯೇನ ಚೇಯಂ ಪೃಥಿವೀ
ಧಾರಯತ್ವಿತಿ ವಾಸುದೇವಸ್ಯ ಪಾದಸ್ಪರ್ಶಾತ್ ಸಜೀವೋऽಜಾಯತ ॥

ಹುಟ್ಟುವಾಗಲೇ ಶ್ವಾಸವಿಲ್ಲದೆ ಹುಟ್ಟಿದ ಈ ಶಿಶುವನ್ನು ನಾನು ಬದುಕಿಸುತ್ತೇನೆ. ಅಭಿಮನ್ಯುವಿನ ಸತ್ಯದಿಂದ ಮಹಾಪರಾಕ್ರಮಶಾಲಿಯಾದ ಈ ಶಿಶುವನ್ನು ಭೂಮಿಯು ಧರಿಸಲಿ (ಎಂದು ಹೇಳಿದನು) ಕೃಷ್ಣನ ಪಾದಸ್ಪರ್ಶದಿಂದ ಮಗುವಿಗೆ ಜೀವ ಕೂಡಿಕೊಂಡಿತು.

ನಾಮ ತಸ್ಯಾಕರೋತ್ ಸುಭದ್ರಾ । ಪರಿಕ್ಷೀಣೇ ಕುಲೇ ಜಾತ
ಉತ್ತರಾಯಾಂ ಪರಂತಪಃ । ಪರೀಕ್ಷಿದಭಯತ್ ತಸ್ಮಾತ್
ಸೌಭದ್ರಾತ್ ತು ಯಶಸ್ವಿನಃ ॥೮೦॥

ಅವನಿಗೆ ಸುಭದ್ರೆಯು ನಾಮಕರಣವನ್ನು ಮಾಡಿದಳು. ಕುಲಕ್ಷಯವು ಸನ್ನಿಹಿತವಾದಾಗ ಸುಭದ್ರೆಯ ಮಗನಾದ ಅಭಿಮನ್ಯುವಿನಿಂದ ಈ ಶತ್ರುತಾಪನನಾದ ಕುಮಾರನು ಹುಟ್ಟಿದನು. ಆದ್ದರಿಂದ ಪರೀಕ್ಷಿತ್ ಎಂದು ಹೆಸರು ಬಂದಿತು.

**ಪರೀಕ್ಷಿತ್ ತು ಖಲು ಮುದ್ರವತೀಂ ನಾಮೋಪಯೇಮೇ ।**
**ತಸ್ಯಾಂ ತತ್ರ ಭವಾನ್ ಜನಮೇಜಯಃ ॥೮೧॥**

ಪರೀಕ್ಷಿತನು ಮುದ್ರವತಿಯನ್ನು ವಿವಾಹಮಾಡಿಕೊಂಡನು. ಅವಳಲ್ಲಿ ಅವನಿಗೆ ಜನಿಸಿದ ಮಗನು ನೀನೇ ಜನಮೇಜಯ.

**ಜನಮೇಜಯಾತ್ತು ಭವತಃ ಖಲು ವಪುಷ್ಟಮಾಯಾಂ**
**ಪುತ್ರೌ ದ್ವೌ ಶತಾನೀಕಃ ಶಂಖಶ್ಚ ॥೮೨॥**

ಜನಮೇಜಯನಾದ ನಿನ್ನಿಂದ ವಪುಷ್ಟಮೆಯಲ್ಲಿ ಶತಾನೀಕ ಮತ್ತು ಶಂಖ ಎಂಬ ಎರಡು ಮಕ್ಕಳು ಜನಿಸಿದರಷ್ಟೆ.

**ಶತಾನೀಕಸ್ತು ಖಲು ವೈದೇಹೀಮುಪಯೇಮೇ ।**
**ತಸ್ಯಾಮಸ್ಯ ಜಜ್ಞೇ ಪುತ್ರೋಽಶ್ವಮೇಧದತ್ತಃ ॥೮೩॥**

ಶತಾನೀಕನು ವೈದೇಹಿಯನ್ನು ಮದುವೆ ಮಾಡಿಕೊಂಡನು. ಅವಳಲ್ಲಿ ಅವನಿಗೆ ಅಶ್ವಮೇಧದತ್ತನೆಂಬ ಮಗನು ಜನಿಸಿದನು.

**ಇತ್ಯೇವ ಪೂರೋರ್ವಂಶಶ್ಚ ಪಾಂಡವಾನಾಂ ಚ ಕೀರ್ತಿತಃ ।**
**ಪೂರೋರ್ವಂಶಮಿಮಂ ಶ್ರುತ್ವಾ ಸರ್ವಪಾಪೈಃ ಪ್ರಮುಚ್ಯತೇ ॥೮೪॥**

ಇದು ಪುರುವಿನ ಮತ್ತು ಪಾಂಡವರ ವಂಶ. ಈ ಪುರುವಂಶವನ್ನು ಶ್ರವಣಮಾಡಿದವನು ಸರ್ವಪಾಪಗಳಿಂದಲೂ ನಿರ್ಮುಕ್ತನಾಗುತ್ತಾನೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂಸಂಹಿತಾಯಾಮಾದಿಪರ್ವಣಿ ಷಟ್‌ಪಂಚಾಶತ್ತಮೋಽಧ್ಯಾಯಃ ॥
॥ ಇತಿ ಸಂಭವಪರ್ವಣಿ ಚತುರ್ಥೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಆದಿಪರ್ವದಲ್ಲಿ ಐವತ್ತಾರನೆಯ ಅಧ್ಯಾಯ ಮುಗಿಯಿತು.



# ಮಹಾಭಾರತ ತಾತ್ಪರ್ಯ ನಿರ್ಣಯ

## ಅಧ್ಯಾಯ-೧೦

ಕಲಿಸ್ತ್ವಯಂ ಬ್ರಹ್ಮವರಾದಿದಾನೀಂ
ವಿಬಾಧತೇಽಸ್ಮಾನ್ ಸಕಲಾನ್ ಪ್ರಜಾಶ್ಚ ।
ಅಜ್ಞಾನ ಮಿಥ್ಯಾಮತಿರೂಪತೋಽಸೌ
ಪ್ರವಿಶ್ಯ ಸಜ್ಞಾನವಿರುದ್ಧರೂಪಃ ॥೩೬॥

ಯಥಾರ್ಥಜ್ಞಾನಕ್ಕೆ ವಿರುದ್ಧ ಸ್ವರೂಪನಾದ ಈ ಕಲಿ ಬ್ರಹ್ಮವರದಿಂದ ಈಗ ಅಜ್ಞಾನ ಮಿಥ್ಯಾಜ್ಞಾನರೂಪದಿಂದ ನಮ್ಮನ್ನೂ ಎಲ್ಲ ಜನರನ್ನೂ ಪ್ರವೇಶಿಸಿ ಬಾಧಿಸುತ್ತಿದ್ದಾನೆ.

ತ್ವದಾಜ್ಞಯಾ ತಸ್ಯ ವರೋಽಬ್ಜಜೇನ ದತ್ತಃ ಸ ಆವಿಶ್ಯ ಶಿವಂ ಚಕಾರ ।
ಕದಾಗಮಾಂಸ್ತಸ್ಯ ಕುಯುಕ್ತಿಬಾಧಾನ್ ನ ಹಿ ತ್ವದನ್ಯಶ್ಚರಿತುಂ ಸಮರ್ಥಃ ॥

ನಿನ್ನ ಆಜ್ಞೆಯಿಂದಲೆ ಬ್ರಹ್ಮ ಅವನಿಗೆ ವರವಿತ್ತಿದ್ದ. ಆದರಿಂದ ಆತ ಶಿವನಲ್ಲಿ ಆವೇಶಗೊಂಡು ದುಷ್ಟಶಾಸ್ತ್ರಗಳನ್ನು ರಚಿಸಿದ. ಅವನ ಕುಯುಕ್ತಿಗಳನ್ನು ಖಂದನ ಮಾಡಲು ನಿನಗಿಂತ ಬೇರೆ ಸಮರ್ಥರಿಲ್ಲ.

ವೇದಾಶ್ಚ ಸರ್ವೇ ಸಹಶಾಸ್ತ್ರಸಂಘಾ ಉತ್ಸಾದಿತಾಸ್ತೇನ ನ ಸಂತಿ ತೇಽದ್ಯ ।
ತತ್ಸಾಧು ಭೂಮಾವವತೀರ್ಯ ವೇದಾನುದ್ಧೃತ್ಯ ಶಾಸ್ತ್ರಾಣಿ ಕುರುಷ್ವ ಸಮ್ಯಕ್

ಶಾಸ್ತ್ರಸಮೂಹಗಳ ಜೊತೆಗೆ ಸಕಲ ವೇದಗಳೂ ಕಲಿಯಿಂದ ನಾಶಹೊಂದಿವೆ. ಅವು ಈಗ ಇಲ್ಲ. ಆದರಿಂದ ನೀನು ಭೂಮಿಯಲ್ಲಿ ಅವತರಿಸಿ ವೇದಗಳನ್ನು ಉದ್ಧರಿಸಿ ಶಾಸ್ತ್ರಗಳನ್ನೂ ಚೆನ್ನಾಗಿ ರಚಿಸು.

ಅದೃಶ್ಯಮಜ್ಞೇಯಮತರ್ಕ್ಯರೂಪಂ ಕಲಿಂ ನಿಲೀನಂ ಹೃದಯೇಽಖಿಲಸ್ಯ ।
ಸಚ್ಛಾಸ್ತ್ರಶಸ್ತ್ರೇಣ ನಿಹತ್ಯ ಶೀಘ್ರಂ ಪದಂ ನಿಜಂ ದೇಹಿ ಮಹಾಜನಸ್ಯ ॥

ಕಲಿ ಅದೃಶ್ಯ, ಅಜ್ಞೇಯ. ಅವನ ರೂಪವನ್ನು ಊಹಿಸಲೂ ಸಾಧ್ಯವಿಲ್ಲ. ಎಲ್ಲರ ಹೃದಯದಲ್ಲಿ ಅಡಗಿರುತ್ತಾನೆ. ಅವನನ್ನು ಸಚ್ಛಾಸ್ತ್ರವೆಂಬ ಶಸ್ತ್ರದಿಂದ ವಧಿಸಿ ಬೇಗನೆ ಭಕ್ತಜನರಿಗೆ ನಿನ್ನ ಲೋಕವನ್ನು ನೀಡು.

ಋತೇ ಭವಂತಂ ನ ಹಿ ತಂ ನಿಹಂತಾ
ತ್ವಮೇಕ ಏವಾಖಿಲಶಕ್ತಿಪೂರ್ಣಃ ।
ತತೋ ಭವಂತಂ ಶರಣಂ ಗತಾ ವಯಂ
ತಮೋನಿಹತ್ಯೈ ನಿಜಬೋಧವಿಗ್ರಹಮ್ ॥೪೦॥

ನೀನು ಹೊರತು ಇನ್ನಾರೂ ಕಲಿಯನ್ನು ಕೊಲ್ಲುವವರಿಲ್ಲ. ನೀನೊಬ್ಬನೆ ಸರ್ವಶಕ್ತಿ ಪೂರ್ಣ. ಆದರಿಂದ ಅಜ್ಞಾನನಾಶಕ್ಕಾಗಿ ಸ್ವರೂಪಜ್ಞಾನ ಶರೀರಯಾದ ನಿನ್ನನ್ನೆ ನಾನು ಶರಣುಹೊಂದಿರುವೆವು.

ಇತೀರಿತಸ್ಸೈರಭಯಂ ಪ್ರದಾಯ ಸುರೇಶ್ವರಾಣಾಂ ಪರಮೋಽಪ್ರಮೇಯಃ ।
ಪ್ರಾದುರ್ಬಭೂವಾಮೃತಭೂರಿಳಾಯಾಂ ವಿಶುದ್ಧ ವಿಜ್ಞಾನ ಘನಸ್ವರೂಪಃ ॥

ದೇವತೆಗಳು ಹೀಗೆ ಹೇಳಿದಾಗ ಶುದ್ಧಜ್ಞಾನ ಸ್ವರೂಪನೂ ಮುಕ್ತರಿಗೆ ಆಶ್ರಯನೂ ಅಪ್ರಮೇಯನೂ ಸರ್ವೋತ್ತಮನೂ ಆದ ಶ್ರೀಹರಿ ದೇವೋತ್ತಮರಿಗೆ ಅಭಯ ನೀಡಿ. ಭೂಮಿಯಲ್ಲಿ ಪ್ರಾದುರ್ಭವಿಸಿದ.

ವಸಿಷ್ಠನಾಮಾ ಕಮಳೋದ್ಭವಾತ್ಮಜಃ
ಸುತೋಽಸ್ಯ ಶಕ್ತಿಸ್ತನಯಃ ಪರಾಶರಃ ।
ತಸ್ಯೋತ್ತಮಂ ಸೋಽಪಿ ತಪೋಽಚರದ್ಧರಿಃ
ಸುತೋ ಮಮ ಸ್ಯಾದಿತಿ ತದ್ಧರಿರ್ದದೌ ॥೪೨॥

ಬ್ರಹ್ಮನ ಪುತ್ರ ವಸಿಷ್ಠ. ವಸಿಷ್ಠನ ಪುತ್ರ ಶಕ್ತಿ. ಶಕ್ತಿಯ ಪುತ್ರ ಪರಾಶರ. ಪರಾಶರನು ಶ್ರೀಹರಿ ತನಗೆ ಪುತ್ರನಾಗಿ ಅವತರಿಸಬೇಕೆಂದು ಉತ್ತಮವಾದ ತಪಸ್ಸು ಮಾಡಿದ. ಹರಿ ಅವನಿಗೆ ಆ ವರವನ್ನಿತ್ತ.

ಉವಾಚ ಚೈನಂ ಭಗವಾನ್ ಸುತೋಷಿತೋ
ವಸೋರ್ಮದೀಯಸ್ಯ ಸುತಾಸ್ತಿ ಶೋಭನಾ ।
ವನೇ ಮೃಗಾರ್ಥಂ ಚರತೋಽಸ್ಯ ವೀರ್ಯಂ
ಪಪಾತ ಭಾರ್ಯಾಂ ಮನಸಾ ಗತಸ್ಯ ॥೪೩॥

ಭಗವಂತ ಸಂತುಷ್ಟನಾಗಿ ಪರಾಶರನಿಗೆ ನುಡಿದ- 'ನನ್ನ ಭಕ್ತನಾದ ವಸುಚಕ್ರವರ್ತಿಗೆ ಪುಣ್ಯವತಿಯಾದ ಮಗಳಿದ್ದಾಳೆ. ಹೇಗೆಂದರೆ ಅವನು ಬೇಟೆಗಾಗಿ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಮಡದಿಯ ನೆನಪಾದುದರಿಂದ ವೀರ್ಯ ಪತನ ಹೊಂದಿತು.

ತಚ್ಛ್ಯೇನ ಹಸ್ತೇ ಪ್ರದದೌ ಸ ತಸ್ಯೈ
ದಾತುಂ ತದನ್ಯೇನ ತು ಯುಧ್ಯತೋಽಪತತ್ ।
ಜಗ್ರಾಸ ತನ್ಮತ್ಸ್ಯವಧೂರ್ಯಮಸ್ವಸು
ರ್ಜಲಸ್ಥಮೇನಾಂ ಜಗೃಹುಃಶ್ಚ ದಾಶಾಃ ॥೪೪॥

ವೀರ್ಯವನ್ನು ರಾಣಿಗೆ ಕೊಡಲು ಒಂದು ಗಿಡುಗನ ಕೈಗಿತ್ತ ರಾಜ. ಆ ಗಿಡುಗ ಇನ್ನೊಂದು ಗಿಡುಗನೊಡನೆ ಹೋರಾಡುವಾಗ ವೀರ್ಯ ಕೆಳಗೆ ಯಮುನೆಯ ನೀರಲ್ಲಿ ಬಿದ್ದಿತು. ಅದನ್ನು ಒಂದು ಹೆಣ್ಣು ಮೀನು ನುಂಗಿತು. ಮೀನನನ್ನು ಬೆಸ್ತರು ಹಿಡಿದರು.

ತದ್ಗರ್ಭತೋಽಭೂನ್ಮಿಥುನಂ ಸ್ವರಾಜ್ಞೇ
ನ್ಯವೇದಯನ್ಸೋಽಪಿ ವಸೋಃ ಸಮರ್ಪಯತ್ ।
ಪುತ್ರಂ ಸಮಾದಾಯ ಸುತಾಂ ಸ ತಸ್ಮೈ
ದದೌ ಸುತೋಽಭೂದಥ ಮತ್ಸ್ಯರಾಜಃ ॥೪೫॥

ಮೀನಿನ ಹೊಟ್ಟೆಯಿಂದ ಹೆಣ್ಣುಗಂಡು ಅವಳಿಮಕ್ಕಳು ಜನಿಸಿದರು. ಅವರನ್ನು ಬೆಸ್ತರು ತಮ್ಮ ಒಡೆಯನಿಗಿತ್ತರು. ಅವನು ವಸುರಾಜನಿಗೆ ನೀಡಿದ. ಆತ ಮಗನನ್ನು ಮಾತ್ರ ಇಟ್ಟುಕೊಂಡು ಮಗಳನ್ನು ಅವನಿಗೇ ಕೊಟ್ಟ. ಬಳಿಕ ಮಗ ಮತ್ಸ್ಯದ ಉದರದಿಂದ ಬಂದವನಾದ್ದರಿಂದ ಮತ್ಸ್ಯರಾಜನೆನಿಸಿದ.

ಕನ್ಯಾ ತು ಸಾ ದಾಶರಾಜಸ್ಯ ಸದ್ಮ-
ನ್ಯವರ್ಧತಾತೀವ ಸುರೂಪಯುಕ್ತಾ ।
ನಾಮ್ನಾ ಚ ಸಾ ಸತ್ಯವತೀತಿ ತಸ್ಯಾಂ
ತವಾತ್ಮಜೋಽಹಂ ಭವಿತಾಸ್ಮ್ಯಜೋಽಪಿ ॥೪೬॥

'ಆ ಕನ್ಯೆ ಬೆಸ್ತರ ಒಡೆಯನ ಮನೆಯಲ್ಲಿ ಅತ್ಯಂತ ಸೌಂದರ್ಯಯುಕ್ತಳಾಗಿ ಬೆಳೆದಿರುವಳು. ಅವಳ ಹೆಸರು ಸತ್ಯವತಿ ಎಂದು. ನಾನು ಜನನರಹಿತನಾಗಿದ್ದರೂ ಅವಳಲ್ಲಿ ನಿನ್ನ ಮಗನಾಗಿ ಹುಟ್ಟುತ್ತೇನೆ' ಎಂದು ಹರಿ ಪರಾಶರನಿಗೆ ವರವಿತ್ತ.

ಇತೀರಿತಶ್ಚಕ್ರಧರೇಣ ತಾಂ ಮುನಿ
ರ್ಜಗಾಮ ಮಾರ್ತಾಂಡಸುತಾಂ ಸಮುದ್ರಗಾಮ್ ।
ಉತ್ತಾರಯಂತೀಮಥ ತತ್ರ ವಿಷ್ಣುಃ
ಪ್ರಾದುರ್ಬಭೂವಾಶು ವಿಶುದ್ಧ ಚಿದ್ಘನಃ ॥೪೭॥

ಚಕ್ರಧಾರಿ ಶ್ರೀಹರಿ ಹೀಗೆ ಹೇಳಿದಾಗ ಪರಾಶರ ಸಮುದ್ರಗಾಮಿಯಾದ ಯಮುನಾ ನದಿಯನ್ನು ದಾಟಿಸುತ್ತಿದ್ದ ಸತ್ಯವತಿಯನ್ನು ಕಂಡು ವಿವಾಹ ಮಾಡಿಕೊಂಡ ಬಳಿಕ ಸಂಗ ಮಾಡಿದ. ಅವಳಲ್ಲಿ ತಕ್ಷಣವೆ ಶುದ್ಧಜ್ಞಾನ ಸ್ವರೂಪನಾದ ಹರಿ ಪ್ರಾದುರ್ಭವಿಸಿದ.

ವಿಸ್ತೀರ್ಣವಕ್ಷಾಃ ಕಮಳಾಯತಾಕ್ಷೋ
ಬೃಹದ್ಭುಜಃ ಕಂಬುಸಮಾನಕಂಠಃ ।
ಸಮಸ್ತವೇದಾನ್ಮುಖತಃ ಸಮುದ್ಗಿರನ್
ಅನಂತಚಂದ್ರಾಧಿಕಕಾಂತಸನ್ಮುಖಃ ॥೫೪॥

ವಿಶಾಲವಾದ ಎದೆಯವರು, ಕಮಲದಂಥ ನಿಡಿದಾದ ಕಣ್ಣಿನವರು, ನಿಡಿದಾದ ತೋಳಿನವರು, ಶಂಖವನ್ನು ಹೋಲುವ ಕಂಠದವರು, ಸಮಸ್ತ ವೇದಗಳನ್ನು ಮುಖದಿಂದ ಉಪದೇಶಿಸುವವರು, ಅನಂತ ಚಂದ್ರರಿಗಿಂತಲೂ ಅಧಿಕಕಾಂತಿಯ ಮುಖವುಳ್ಳವರು, ವೇದವ್ಯಾಸರು.

ಪ್ರಬೋಧಮುದ್ರಾಭಯದೋರ್ದ್ವಯಾನ್ವಿತೋ
ಯಜ್ಞೋಪವೀತಾಜಿನಮೇಖಲೋಲ್ಲಸನ್ ।
ದೃಶಾ ಮಹಾಜ್ಞಾನಭುಜಂಗದಷ್ಟ-
ಮುಜ್ಜೀವಯಾನೋ ಜಗದತ್ಯರೋಚತ ॥೫೫॥

ಜ್ಞಾನ ಅಭಯ ಮುದ್ರೆಗಳನ್ನು ತೋರುವ ಎರಡು ಕೈಗಳುಳ್ಳವರು, ಯಜ್ಞೋಪವೀತ ಕೃಷ್ಣಾಜಿನ ಮುಂಜಿಗಳಿಂದ ಶೋಭಿಸುತ್ತ, ಮಹಾ ಅಜ್ಞಾನವೆಂಬ ಹಾವಿನ ಕಡಿತಕ್ಕೆ ತುತ್ತಾದ ಜಗತ್ತನ್ನು ಕಣ್ಣನೋಟದಿಂದಲೆ ಪುನರುಜ್ಜೀವನಗೊಳಿಸುವವರು, ಇಂಥ ವೇದವ್ಯಾಸರು ಜಗತ್ತನ್ನೇ ಮೀರಿಸುವ ಪ್ರಕಾಶದಿಂದ ಬೆಳಗಿದರು.

ಸ ಲೋಕಧರ್ಮಾಭಿರಿರಕ್ಷಯಾ ಪಿತು-
ರ್ದ್ವಿಜತ್ವಮಾಪ್ಯಾಶು ಪಿತುರ್ದದೌ ನಿಜಮ್ ।

